# ಹರಿಹರನ ಐದು ರಗಳೆಗಳು

ಸಂಪಾದಕಿ

ಎಂ. ಎನ್. ಲೀಲಾವತಿ



ಅಧ್ಯಯನ ಸಂಸ್ಥೆ :: ಮೈಸೂರು ವಿಶ್ವವಿದ್ಯಾನಿಲಯ

ಕನ್ನಡ ಅಧ್ಯಯನ ಸಂಸ್ಥೆ

ಪ್ರಾಚ್ಯ ಕಾವ್ಯಮಾಲೆ-೨೭

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

ವಿಭಾಗ ಸಂಪಾದಕ

ಎಸ್. ಬಸವಾರಾಧ್ಯ

# ಹರಿಹರನ ಐದು ರಗಳೆಗಳು

HARIHARANA AIDU RAGALEGALU— edited by M.N. Leelavathi; published by the Institute of Kannada Studies, Manasagangotri, University of Mysore, Mysore-6. First Edition 1973, Pp xxxii+89.





ಬೆಲೆ

ಸಾದಾ ಪ್ರತಿ : ರೂ. 3-00

ಉತ್ತಮ ಪ್ರತಿ : ರೂ 6-00

ಮಾರಾಟಗಾರರು

ಡೈರೆಕ್ಟರ್

ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು



ಮುದ್ರಕರು

ಯು. ಎಸ್. ಪ್ರಿಂಟರ್ಸ್, ಚಾಮುಂಡಿಪುರಂ, ಮೈಸೂರು-೪

# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ 1966ರ ಕೊನೆಯಲ್ಲಿ ಪ್ರಾಚ್ಯಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ವಿಭಾಗವನ್ನು ಅಧ್ಯಯನ ಸಂಸ್ಥೆಯ 'ಸಂಪಾದನ ವಿಭಾಗ'ವೆಂದು ಹೆಸರಿಸಲಾಯಿತು. ಕ್ರಿ.ಶ. 1436ರಲ್ಲಿ ಪ್ರತಿಮಾಡಲಾಗಿರುವ 'ಪುಷ್ಪದಂತ ಪುರಾಣ'ದ ಹಸ್ತಪ್ರತಿಯಿಂದ ಹಿಡಿದು 1850 ರಲ್ಲಿ ರಚಿತವಾಗಿರುವ 'ಪ್ರಭಾವತಿ ಪರಿಣಯ'ದ ಹಸ್ತಪ್ರತಿ ವರೆಗೆ ಇಂದು 5,000ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ. ಕನ್ನಡ ಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ, ಸಂಶೋಧಕರಿಗೆ, ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರ ಗ್ರಂಥಗಳ ತವರಾಗಿದೆ, ಪ್ರೇರಣೆಯ ಸ್ರೋತವಾಗಿದೆ.

ಮುದ್ರಣ ಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ ಮಾನವ ಜನಾಂಗಕ್ಕೆ ದೊರೆತ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವ ಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾಗಿಯೇ, ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು ಪ್ರತಿಲಿಪೀಕರಿಸಿರುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನೂ ಪುಣ್ಯಕಾರ್ಯವೆಂದು ಬಗೆದು ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ-ಶಾಸ್ತ್ರ-ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ—ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ ರಚನೆಗೆ, ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು ಐತಿಹಾಸಿಕ ಪುನರ್‌ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ, ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. ಕಾವ್ಯ ಪ್ರಯೋಗ ಪರಿಣತಮತಿಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ

ಲಭ್ಯವಾಗಿದ್ದಿರಬೇಕು. ನಾಡಿನ ಹಲನೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತಮಾನಗಳವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶ ಕಾಲ ಪರಿಸರಗಳ ಪ್ರಭಾವದಿಂದ, ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆಗುಂಪಾಗುತ್ತ ಬಂದು ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸಲಾರದೆ ನದಿಯ ಪಾಲೋ ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕು ಕಂಡು, ಪೂಜಾರ್ಹವಾಗಿ, ಹಾಲುಂಡು ಮತ್ತೆ ಕತ್ತಲಕೋಣೆಯ ಮೂಲೆ ಸೇರಬೇಕಾದ ದುಸ್ಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರಮಾಡಿ ಹಸ್ತಪ್ರತಿಗಳನ್ನು ಹೊರಗೆಳೆದು ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರೀಕ್ಷಿಸಿ, ಸಂಪಾದಿಸುವ ಹೊಣೆಯನ್ನು ಈ ಸಂಸ್ಥೆಯ ಸಂಪಾದನ ವಿಭಾಗ ವಹಿಸಿದೆ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಷ್ಕಾರ ನೀಡಲು ಹಸ್ತಪ್ರತಿಗಳ ಸಂಗ್ರಹಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ, ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದ ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ, ಅವರ ನೆನಪಿಗಾಗಿ ಮಠಗಳು ಸ್ಮಾರಕಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿಯಿಂದ ಬೆಳೆಸಿಕೊಂಡು ಬರುವತ್ತ ಆದ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದೂ ಅತ್ಯಂತ ಮುಖ್ಯವಾದ ಹೊಣೆ. ಕೀಟಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು, ಕೀಟನಿರೋಧಕ ತೈಲಲೇಪನಮಾಡುವುದು, ವಾಯುನಿಯಂತ್ರಿತ ಕೊಠಡಿಯಲ್ಲಿಟ್ಟು ಪ್ರಧೂಮನ ಉಪಚಾರ ನೀಡುವುದು (Fumigation treatment), ತೀರ ತ್ರುಟಿತವಾದ ಹಸ್ತಪ್ರತಿಗಳನ್ನು ಮೈಕ್ರೊಫಿಲಂಗಳಲ್ಲಿ ಶಾಶ್ವತಗೊಳಿಸುವುದು ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ ಶ್ರಮಸಾಧ್ಯವಾದ ಹಾಗೂ ಆರ್ಥಿಕವಾಗಿ ಸುಲಭಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಎಲ್ಲ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥಸಂಪಾದನೆ ಶ್ರಮಸಾಧ್ಯವಾದ ಕಾರ್ಯ; ವ್ಯುತ್ಪತ್ತಿ, ವಿದ್ವತ್ತು, ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ಹಸ್ತಪ್ರತಿಗಳೂ ಕಾಲ, ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು. ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೇ. ಪ್ರತಿಭಾವಂತರೂ ವ್ಯುತ್ಪನ್ನಮತಿಗಳೂ ಕಾವ್ಯರಚನಾಸಮರ್ಥರೂ ಮೂಲವನ್ನು ಕೆಲವು ವೇಳೆ ಉತ್ತಮಪಡಿಸಿ, ಕೆಲವು ವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ ಅಲ್ಲಲ್ಲಿ ಮೂಲಧಾಟಿಗೆ ಭಂಗಬರದಂತೆ ತಮ್ಮ ಸ್ವಂತರಚನೆ ಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿ ವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು; (ಒಂದು ವೇಳೆ ವಾಸ್ತವವಾಗಿ, ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದು ತಮ್ಮ ಚಪಲವನ್ನು ತೀರಿಸಿ ಕೊಂಡದ್ದೂ ಸತ್ಯ!) ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು. ಲಿಪಿಕಾರರೂ ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿದು, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿಗಳನ್ನು ತಂದು ಬಿಡುತ್ತಿದ್ದುದುಂಟು. ಇಂತಹ ಅನೇಕ ಕಾರಣಗಳಿಂದಾಗಿ ಒಂದೇ ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು ಅವೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನರ್ ರಚಿಸಬೇಕಾಗುತ್ತದೆ. ಇದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತದೆ. ಇಂತಹ ಸಂದರ್ಭ ಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದುಹೋಗುತ್ತದೆ. ವಿದ್ವತ್ತಿನ ಹಿನ್ನೆಲೆಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲವಾದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯ ವಾಗುವುದಿಲ್ಲ. ಗ್ರಂಥಸಂಪಾದನೆ ಇಂದು ವಿಶಿಷ್ಟ ಶಾಸ್ತ್ರವಾಗಿಯೇ ಬೆಳೆದಿದೆ.

'ಸಂಪಾದನ ವಿಭಾಗ' ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾ ನಿಕವಾಗಿ ಸಂಪಾದಿಸಿ, ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ, ವಿಸ್ತಾರವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ, ದೇಶ, ಕೃತಿಗಳ ವಿಚಾರವನ್ನು ಚರ್ಚಿಸಿ, ಅವುಗಳ ಸಾಹಿತ್ಯಿಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ಮತ್ತು ವ್ಯಾಖ್ಯಾನಗಳನ್ನು ನೀಡಿ, ಕೆಲವು ಸಂದರ್ಭಗಳಲ್ಲಿ ಗದ್ಯಾನುವಾದಗಳನ್ನು ಕೊಟ್ಟು, ಅರ್ಥಕೋಶವನ್ನು ಒದಗಿಸಿ ಬೆಳಕಿಗೆ ತರುತ್ತಿದೆ.

ಇದುವರೆಗೆ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಸಿದ್ಧಪಡಿಸಿದ್ದ ಕೃತಿ ಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ

ಹಸ್ತಪ್ರತಿಗಳನ್ನುಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನೂ ಪ್ರಕಟಿಸಲು ಯೋಚಿಸಲಾಗಿದೆ. ಇದರಿಂದ ಪ್ರಕಟಣೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

ಸಂಪಾದನ ವಿಭಾಗ ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ನಮಗೆ ನೆರವಾಗುತ್ತಿದೆ. ಎರಡು ಸಾವಿರ ವರ್ಷಗಳ ಸುದೀರ್ಘ ಪರಂಪರೆಯನ್ನುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನ ಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲನಗಳನ್ನು ಸಿದ್ಧಪಡಿಸುವುದೂ ಸಂಪಾದನ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಈಗ ಪ್ರಕಟವಾಗುತ್ತಿರುವ 'ಹರಿಹರನ ಐದು ರಗಳೆಗಳು' ಅಧ್ಯಯನ ಸಂಸ್ಥೆಯ ಪ್ರಾಚ್ಯಕಾವ್ಯಮಾಲೆಯ ಇಪ್ಪತ್ತೇಳನೆಯ ಪ್ರಕಟಣೆಯಾಗಿದೆ. ಸಂಪಾದನ ವಿಭಾಗದ ಉಪನಿರ್ದೇಶಕರಾದ ಶ್ರೀ ಎನ್. ಬಸವಾರಾಧ್ಯರ ನೇತೃತ್ವದಲ್ಲಿ ಸಂಪಾದಕಿ ಶ್ರೀಮತಿ ಎಂ.ಎನ್. ಲೀಲಾವತಿ ಅವರು 'ಹರಿಹರನ ಐದು ರಗಳೆ'ಗಳನ್ನು ಸಂಪಾದಿಸಿ ಕೊಟ್ಟಿದ್ದಾರೆ. ಈ ಗ್ರಂಥವನ್ನು ಸಿದ್ಧಪಡಿಸಿಕೊಟ್ಟ ಶ್ರೀಮತಿ ಎಂ. ಎನ್. ಲೀಲಾವತಿ ಅವರಿಗೂ ಶೀಘ್ರವಾಗಿ ಮುದ್ರಿಸಿಕೊಟ್ಟಿರುವ ಯು. ಎಸ್. ಪ್ರಿಂಟರ್ಸ್ ಅವರಿಗೂ ನಮ್ಮ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
೧-೩-೧೯೭೩

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

# ವಿಭಾಗ ಸಂಪಾದಕರ ಮಾತು

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹರಿಹರನ ಹೆಸರು ಶಾಶ್ವತವಾಗಿ ನಿಲ್ಲುವಂತಹುದು. ಶಿವಶರಣರ ಚರಿತ್ರೆಯನ್ನು ತನುವುಬ್ಬಿ ಮನವುಬ್ಬಿ ಹಾಡಿದವನು ಹರಿಹರ. ಈತ ಕನ್ನಡದಲ್ಲಿ ರಗಳೆ ಎಂಬ ಛಂದಸ್ಸಿನ ಒಂದು ಪ್ರಕಾರವನ್ನು ಪ್ರಾರಂಭಿಸಿದನು. ಈತನು ತರುವಾಯದ ಕವಿಗಳಿಗೆ ಸ್ಫೂರ್ತಿಯನ್ನೂ ನವಚೇತನವನ್ನೂ ನೀಡಿದ್ದಾನೆ. ಆದುದರಿಂದಲೇ ಮುಂದೆ ಬಂದ ಅನೇಕ ಕವಿಗಳು ಈತನನ್ನು ಮುಕ್ತಕಂಠದಿಂದ ಸ್ಮರಿಸಿ ಹಾಡಿ ಹೊಗಳಿ ತಮ್ಮ ಕೃತಿಗಳನ್ನು ಪ್ರಾರಂಭಿಸಿದ್ದಾರೆ. ಭಕ್ತಿ ವಿರಕ್ತಿಗಳೆರಡರ ಸಾಕಾರಸ್ವರೂಪವೇ ಹರಿಹರ. ಈತನ ಜೀವನ ಚರಿತ್ರೆಯೇ ಒಂದು ಪವಾಡದಂತಿದೆ. ಹನ್ನೆರಡನೆಯ ಶತಮಾನದ ಪ್ರಮುಖ ವಚನ ಕಾರರನ್ನು ಕುರಿತು ಚಾರಿತ್ರಿಕ ಮಾಹಿತಿಯಿಂದ ಕೂಡಿದ ರಗಳೆಗಳನ್ನು ಬರೆದಿರುವವರಲ್ಲಿ ಹರಿಹರನೇ ಮೊಟ್ಟಮೊದಲಿಗ. ಲೌಕಿಕ ಲಾಭದಾಶೆಗಳನ್ನು ಕಡೆಗಣಿಸಿ ಪಾರಮಾರ್ಥಿಕದಲ್ಲಿ ಮನ ನಿಲ್ಲಿಸಿದವನು ಈತ. ತನ್ನ ಎಲ್ಲ ಕೃತಿಗಳನ್ನೂ ವಿರೂಪಾಕ್ಷನ ಅಂಕಿತದಲ್ಲೇ ಬರೆದು ವಿರೂಪಾಕ್ಷನನ್ನು ಸಾಕ್ಷಾತ್ಕಾರ ಮಾಡಿಕೊಂಡು ಕೊನೆಗೆ ವಿರೂಪಾಕ್ಷನಲ್ಲೇ ಐಕ್ಯನಾದವನು ಹರಿಹರ.

ಗಿರಿಜಾಕಲ್ಯಾಣ, ರಕ್ಷಾಶತಕ, ಪಂಪಾಶತಕ, ಮುಡಿಗೆಯ ಅಷ್ಟಕ, ಶಿವಶರಣರ ರಗಳೆಗಳು—ಇವು ಹರಿಹರನ ಕೃತಿಗಳು. ಈತನು ಬರೆದಿರುವ ಶಿವಶರಣರ ರಗಳೆಗಳ ಸಂಖ್ಯೆ ಎಷ್ಟೆಂಬುದು ಒಂದು ಸಮಸ್ಯೆಯಾಗಿದೆ. ಈ ದಿಶೆಯಲ್ಲಿ ಸಂಶೋಧನೆ ನಡೆಸಿದ ವಿದ್ವಾಂಸರಲ್ಲೂ ಏಕಾಭಿಪ್ರಾಯವಿಲ್ಲ. ಡಾ. ಹಿರೇಮಲ್ಲೂರ ಈಶ್ವರನ್ ಅವರು ೧೧೭ ರಗಳೆಗಳು ಎಂದೂ ಶ್ರೀ ಎಚ್. ದೇವೀರಪ್ಪನವರು ೬೧ ರಗಳೆಗಳು ಎಂದೂ ಅಭಿಪ್ರಾಯಪಟ್ಟಿದ್ದಾರೆ. ಪ್ರಕೃತ ಗ್ರಂಥದಲ್ಲಿ ಸಂಪಾದಿಸಿರುವ ಸುರಗಿಯ ಚೌಡಯ್ಯ, ಮುಸುಟೆಯ ಚೌಡಯ್ಯ, ತೆಲುಗು ಜೊಮ್ಮಯ್ಯ, ಬಾಹೂರ ಬೊಮ್ಮಯ್ಯ ಮತ್ತು ಕೋವೂರು ಬೊಮ್ಮಯ್ಯ—ಈ ರಗಳೆಗಳು ಹರಿಹರ ಕೃತವೆಂದೇ ಈ ಇಬ್ಬರು ವಿದ್ವಾಂಸರೂ ಒಪ್ಪಿದ್ದಾರೆ.

ತಾವು ದೃಢವಾಗಿ ನಂಬಿರುವ ಧರ್ಮ ದೈವದ ಬಗೆಗೆ ಅತೀವ ನಿಷ್ಠೆಯನ್ನು ತಾಳಿ ಅದಕ್ಕಾಗಿ ಪ್ರಾಣಾರ್ಪಣ ಮಾಡಿಕೊಂಡವರು ಕಾವ್ಯ ಪುರಾಣಗಳಲ್ಲಿ ಕಂಡು ಬರುತ್ತಾರೆ. ಈ ಸಂಕಲನದಲ್ಲಿ ಚಿತ್ರಿಸಿರುವ ಐವರು ಶರಣರು ಅಂತಹವರೇ. ಆದುದರಿಂದ ಈ ರಗಳೆಗಳನ್ನೇ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ. ಈಗ ಹೊರಬರುವ ಈ ಐದು ರಗಳೆಗಳಲ್ಲಿ ತೆಲುಗು ಜೊಮ್ಮಯ್ಯ ಮತ್ತು ಬಾಹೂರು ಬೊಮ್ಮಯ್ಯನ ರಗಳೆಗಳು ರಾವ್ ಬಹದ್ದೂರ್ ಡಾ. ಪಿ. ಜಿ. ಹಳಕಟ್ಟಿ ಅವರಿಂದ ಈ ಹಿಂದೆಯೇ ಪ್ರಕಟವಾಗಿವೆ. ಸುರಗಿಯ ಚೌಡಯ್ಯ, ಮುಸುಟೆಯ ಚೌಡಯ್ಯ ಮತ್ತು ಕೋವೂರು ಬೊಮ್ಮಯ್ಯ ಈ ಮೂರು ರಗಳೆಗಳು ಮೊದಲಬಾರಿಗೆ ಬೆಳಕು ಕಾಣುತ್ತಿವೆ.

ಹರಿಹರನ ಐದು ರಗಳೆಗಳ ಸಂಪಾದನ ಕಾರ್ಯವನ್ನು ಈ ವಿಭಾಗದ ಮುಖ್ಯಸ್ಥರಾಗಿದ್ದ ಶ್ರೀ ಎಚ್. ದೇವೀರಪ್ಪನವರು ಸಂಶೋಧಕ ಸಹಾಯಕಿಯಾಗಿದ್ದ ಶ್ರೀಮತಿ ಎಂ.ಎನ್. ಲೀಲಾವತಿ ಅವರಿಗೆ ವಹಿಸಿದ್ದರು. ಅದರಂತೆ ಅವರು ಮುದ್ರಣ ಪ್ರತಿಯನ್ನು ಸಿದ್ಧಪಡಿಸಿದ್ದರು. ಶ್ರೀಮತಿ ಲೀಲಾವತಿ ಅವರು ಈ ಸಂಸ್ಥೆಯಿಂದ ಬೇರೆ ಸಂಸ್ಥೆಗೆ ಹೋದ ಮೇಲೆ ಈ ಗ್ರಂಥದ ಕರಡಚ್ಚು ತಿದ್ದುವ ಕೆಲಸವನ್ನು ಸಂಪಾದನ ವಿಭಾಗದ ವಿದ್ವಾಂಸರು ನಿರ್ವಹಿಸಿದ್ದಾರೆ. ಸಂಪಾದನ ಕಾರ್ಯದಲ್ಲಿ ಸಂಶಯಗಳು ತಲೆದೋರಿದಾಗ ಮೂಲ ಮಾತೃಕೆಗಳೊಡನೆ ಪರಿಶೀಲಿಸುವಲ್ಲಿ ಪೀಠಿಕೆಗೆ ಮಾಹಿತಿಯನ್ನು ಒದಗಿಸುವಲ್ಲಿ ಈ ವಿಭಾಗದ ಸಂಶೋಧಕ ಸಹಾಯಕರಾದ ಶ್ರೀ ಜಿ. ಜಿ. ಮಂಜನಾಥನ್ ಅವರು ಶ್ರದ್ಧೆಯಿಂದ ಸಂಪಾದಕಿಯರಿಗೆ ನೆರವಾಗಿದ್ದಾರೆ. ಈ ವಿಶಿಷ್ಟ ರಗಳೆಗಳನ್ನು ಕನ್ನಡ ಜನತೆ ಆದರದಿಂದ ಬರಮಾಡಿಕೊಳ್ಳುವರೆಂದು ನಂಬಲಾಗಿದೆ.

ಮೈಸೂರು ಎನ್. ಬಸವಾರಾಧ್ಯ

೧೬-೩-೧೯೭೩

## ವಿಷಯಸೂಚಿ

# ಪೀಠಿಕೆ

## I ಕವಿ ಕಾವ್ಯ ವಿಚಾರ

ಪಂಪಾವಿರೂಪಾಕ್ಷನ ಸಾಕ್ಷಾತ್ ಸುಪುತ್ರ ಹರಿಹರ ಭಕ್ತಕವಿ. ಈತ ವಸ್ತುವಿನ ಆಯ್ಕೆಯಿಂದ ಭಾಷಾಪ್ರಯೋಗದಿಂದ ಛಂದೋವೈಶಿಷ್ಟ್ಯದಿಂದ ಕನ್ನಡ ಸಾಹಿತ್ಯದ ಅದ್ವಿತೀಯ ಕ್ರಾಂತಿಕಾರಿ ಕವಿಯಾಗಿ ಹನ್ನೆರಡನೆಯ ಶತಮಾನದಲ್ಲಿ ಮೆರೆದನು. ಈತನ ಜೀವಿತದ ಬಗ್ಗೆ ಸಂಗತಿಗಳನ್ನು ಒದಗಿಸುವ ಆಕರಗಳೆಂದರೆ ರಾಘವಾಂಕ ಚಾರಿತ್ರ, ಪದ್ಮರಾಜ ಪುರಾಣ, ಚೆನ್ನಬಸವ ಪುರಾಣ, ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ ಮೊದಲಾದ ಕೃತಿಗಳು. ಸಿದ್ಧನಂಜೇಶನ ರಾಘವಾಂಕ ಚಾರಿತ್ರದ ೨-೩ಳನೆಯ ಪದ್ಯದಲ್ಲಿ ಬರುವ—

ಮಿಸುಪ ಜಡೆಮುಡಿಯಿಂದೆ ಪಟ್ಕುಂಡಲದಿ ಶಿರದೊ
ಳೆಸೆವ ಲಿಂಗದಿ ಯಜ್ಞಸೂತ್ರದಿಂ ರುದ್ರಾಕ್ಷೆ
ವಿಸರಮಂ ತಳೆದನಯವಂಗಳಿಂ ಭಸಿತಾಂಗದಿಂದುಸಿರ್ವ ಶಿವಮಂತ್ರದಿಂ
ಒಸೆದು ಕೈಗೈದಕ್ಷಮಾಲೆಯಿಂ ಘೋತ್ರ ಶೋ
ಭಿಸುವ ಪಾವುಗೆ ಕಮಂಡಲು ಕೊಡೆಗಳಿಂದೆ ರಂ
ಜಿಸುತೆರಡನೆಯ ಶಿವನು ಎಂಬಂತೆ ಹರೀಶ್ವರನಲ್ಲಿಗೈತಂದನು

ಎಂಬ ವರ್ಣನೆಯಿಂದ ಹರಿಹರನ ವ್ಯಕ್ತಿಚಿತ್ರ ಕಣ್ಣಿಗೆ ಕಟ್ಟುತ್ತದೆ.

ಹರಿಹರನ ತಾಯಿತಂದೆಯರ ಬಗ್ಗೆ ಖಚಿತವಾಗಿ ತಿಳಿದುಬಂದಿಲ್ಲ. ರಾಘವಾಂಕ ಚಾರಿತ್ರದ ಪ್ರಕಾರ ಶರ್ವಾಣಿ ಈತನ ತಾಯಿ, ಹಂಪೆಯ ಮಹಾದೇವ ತಂದೆ. ಹರಿಹರ ತನ್ನ ಗುರುಪರಂಪರೆಯನ್ನು ಸ್ಪಷ್ಟವಾಗಿ ಹೇಳಿದ್ದಾನೆ. ಅದು ಹೀಗಿದೆ—

ಹಂಪೆಯ ಶಂಕರದೇವರ
ಹಂಪೆಯ ಗುರುಮಾದಿರಾಜನೆಸರ ಮತ್ತಾ
ಹಂಪೆಯ ಮಾದರಸರ ದಯೆ
ಯಿಂ ಪೊಗಳ್ದಂ ರಸಿಕಚಕ್ರಿ ಹರಿಹರದೇವಂ ॥ (ತಿರುನೀಲಕಂಠರ ರಗಳೆ)

ಹಂಪೆಯ ಮಾದರಸರ ಕಾರುಣ್ಯದ ಶಿಶುವಾದ ಹರಿಹರದೇವ ಮೊದಲು ಶೈವನಾಗಿದ್ದು ಅನಂತರ ಉಗ್ರವೀರಶೈವನಾದವನು. ಆತನ ಶಿವನಿಷ್ಠೆ ಬಳ್ಳಿವರಿದು "ಸ್ವಪ್ನದೊಳಾದಡಿನ್ನು ಶಂಕರನ ತತ್ಪ್ರಮಥೇರ ಪುರಾತನರನಲ್ಲದೆ ಇತರರ ಸ್ತುತಿಸಬೇಡ" ಎನ್ನುವ ನಿಲುವು ಇನ್ನೂ ಸ್ಪಷ್ಟವಾಗಿ ಪಂಪಾಶತಕದ—

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ತಾ
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನನೆನೆ ಪೊಗಳರ್ಚಿಸಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ

ಎಂಬ ಪದ್ಯದಿಂದ ವ್ಯಕ್ತವಾಗಿದೆ.

ಹರಿಹರನ ಕಾಲದ ಬಗ್ಗೆ ವಿಪುಲವಾದ ಚರ್ಚೆ ನಡೆದಿದೆ. ವಿದ್ವಾಂಸರು ಭಿನ್ನ ಭಿನ್ನ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಅವರಲ್ಲಿ ಕವಿಚರಿತೆಕಾರರು 1141-1173 ಎಂದೂ ಕಿಟ್ಟೆಲ್ ಅವರು ಸು. 1290 ಎಂದೂ ಡಾ. ಎ. ವೆಂಕಟಸುಬ್ಬಯ್ಯನವರು 1260-1270 ಎಂದೂ ಎಂ. ಗೋವಿಂದ ಪೈ ಅವರು ಸು. 1145-1220 ಎಂದೂ ಕೆ. ಜಿ. ಕುಂದಣಗಾರರು ಮತ್ತು ಸ. ಸ. ಮಾಳವಾಡರು 1216 ಎಂದೂ ಎಚ್. ದೇವೀರಪ್ಪನವರು ಮತ್ತು ದೇ. ಜವರೇಗೌಡರು 1220-1285 ಎಂದೂ ವಿವಿಧ ಆಧಾರಗಳಿಂದ ನಿರ್ಧರಿಸಿದ್ದಾರೆ. ಆದರೆ ಡಾ. ಡಿ.ಎಲ್. ನರಸಿಂಹಾಚಾರ್ಯರು ಸಿದ್ಧರಾಮ ಚಾರಿತ್ರದ ಮುನ್ನುಡಿಯಲ್ಲಿ ಹರಿಹರನು ಸು. 1145ರಲ್ಲಿ ರಚಿತವಾದ 'ಪೆರಿಯ ಪುರಾಣ' ದಿಂದ 'ಅರುವತ್ತು ಮೂರು ಪುರಾತನ'ರ ಕಥಾವಸ್ತುಗಳನ್ನು ತೆಗೆದುಕೊಂಡಿರುವನೆಂದು ಹೇಳಲು ಆಧಾರವಿರುವುದರಿಂದ ಅಲ್ಲಿಂದೀಚೆಗೆ, 'ಏಕಾಂತ ರಾಮಯ್ಯನ ರಗಳೆ' ಬರೆದಿರುವುದರಿಂದ ಸು. 1190ರಿಂದ ಈಚೆಗೂ, ಸೂಕ್ತಿಸುಧಾರ್ಣವ ಮತ್ತು ಶಬ್ದಮಣಿದರ್ಪಣಗಳಲ್ಲಿ ಗಿರಿಜಾಕಲ್ಯಾಣದ ಪದ್ಯಗಳು ದೊರೆತಿರುವುದರಿಂದ ಸು. 1245ಕ್ಕೆ ಮೊದಲೂ ಒಟ್ಟಿನಲ್ಲಿ "ಹರಿಹರನು ಒಂದನೆಯ ನರಸಿಂಹನ ಆಳಿಕೆಯಲ್ಲಿಯೋ ಅವನ ಮಗನಾದ ಎರಡನೆಯ ವೀರಬಲ್ಲಾಳನಲ್ಲಿಯೋ (1173-1220) ಕೆಲವು ವರ್ಷ ಕರಣಿಕನಾಗಿದ್ದು ಹಂಪೆಗೆ ಬಂದು ಅಲ್ಲಿ ನೆಲಸಿ 1200ರ ಸುಮಾರಿಗೆ ಪಂಪಾಶತಕ, ಗಿರಿಜಾಕಲ್ಯಾಣಗಳನ್ನು ರಚಿಸಿ ಆಮೇಲೆ ರಗಳೆಗಳನ್ನು ಬರೆದು ಎರಡನೆಯ ನರಸಿಂಹನ ಆಳಿಕೆಯ ಪ್ರಾರಂಭದಲ್ಲಿ ಎಂದರೆ 1225ರಲ್ಲಿ ವಿರೂಪಾಕ್ಷನಲ್ಲಿ ಐಕ್ಯವಾದಂತೆ ಊಹಿಸಬಹುದು" ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಮಾತು ಬಹುಸಮ್ಮತವಾಗಿದೆ.

ಗಿರಿಜಾಕಲ್ಯಾಣ, ರಕ್ಷಾಶತಕ, ಪಂಪಾಶತಕ, ಮುಡಿಗೆಯ ಅಷ್ಟಕ ಮತ್ತು ನೂರಾರು ರಗಳೆಗಳು ಹರಿಹರನ ಕೃತಿಗಳಾಗಿವೆ. ಗಿರಿಜಾಕಲ್ಯಾಣವು ಒಂದು ಚಂಪೂ ಕಾವ್ಯ. ಹರಿಹರನೇ "ಗಿರಿಜಾಕಲ್ಯಾಣಮೆಂತೀ ನುತಕೃತಿಯ ಪೆಸರ್ ಭಾಪುರೇ ಕಾವ್ಯನಾಥಂ ಗಿರಿಜಾನಾಥಂ ಕಥಾಸಂಗತಿ ವರಗಿರಿಜೋದ್ವಾಹವೀ ಕಾವ್ಯಮಂ ವಿಸ್ತರದಿಂ ತಾನೊಲ್ದು ಪೇಳ್ದಂ ಶಿವಕವಿ ಹರಿದೇವಂ ಮಹೋತ್ಸಾಹದಿಂದಂ" ಎಂದು ಹೇಳಿದ್ದಾನೆ. ಪಂಪಾ ವಿರೂಪಾಕ್ಷನ ಸ್ತುತಿ ಮತ್ತು ಭಕ್ತಿವೈರಾಗ್ಯಗಳು ಕ್ರಮವಾಗಿ ಪಂಪಾಶತಕ ಮತ್ತು ರಕ್ಷಾಶತಕಗಳ ವಸ್ತು. ಮುಡಿಗೆಯ ಅಷ್ಟಕವು ಕ್ಷಕಾರ ಪ್ರಾಸದ ೮ ಪದ್ಯಗಳಲ್ಲಿ ಹರಿಹರನ ಶಿವೇಕನಿಷ್ಠೆ ಮತ್ತು ಪವಾಡವೊಂದನ್ನು ಚಿತ್ರಿಸುವ ಕೃತಿ.

ಕನ್ನಡ ಸಾಹಿತ್ಯದಲ್ಲಿ ಹರಿಹರನ ಹೆಸರು ಚಿರಸ್ಥಾಯಿಯಾಗಿರುವುದು ಆತನ ರಗಳೆಗಳಿಂದ. ಆತನು ಬರೆದ ರಗಳೆಗಳ ಸಂಖ್ಯಾನಿರ್ಣಯವೇ ಒಂದು ಸಾಹಸದ ಮಾತಾಗಿದೆ. ರಗಳೆಯನ್ನು ಮೊಟ್ಟಮೊದಲು ಕಥನಕವನಕ್ಕೆ, ಕೃತಿರಚನೆಗೆ ಬಳಸಿಕೊಂಡ ಕೀರ್ತಿ ಇವನದು. ಕನ್ನಡ ಸಾಹಿತ್ಯದಲ್ಲಿ ರಗಳೆಯ ಜೊತೆಗೆ ಗದ್ಯಕ್ಕೂ ಒಂದು ಸ್ಥಿರವಾದ

ಸ್ಥಾನವನ್ನು ಕಲ್ಪಿಸಿದ್ದಾನೆ. ಈತನ ರಗಳೆಯ ಸಾಹಿತ್ಯವನ್ನು ಸ್ಥೂಲವಾಗಿ ಮೂರು ವಿಭಾಗ ಮಾಡಬಹುದು. ಅವು ಪುರಾತನರು, ನೂತನರು ಮತ್ತು ಇತರ. ಬಸವರಾಜ ದೇವರ ರಗಳೆ, ನಂಬಿಯಣ್ಣನ ರಗಳೆ, ಮಹಾದೇವಿಯಕ್ಕನ ರಗಳೆ, ಮಲುಹಣನ ರಗಳೆ ಹೀಗೆ ನೂರಾರು ಶಿವಶರಣರ ರಗಳೆಗಳನ್ನು ಬರೆದು ಈತನು ಕನ್ನಡ ಸಾಹಿತ್ಯದ 'ಜೀವನ ಚರಿತ್ರೆ' ವಿಭಾಗಕ್ಕೆ ಮಹೋಪಕಾರ ಮಾಡಿದ್ದಾನೆ. ಇವನ ಕಾವ್ಯಕಥಾನಾಯಕರಲ್ಲಿ ಕರ್ಣಾಟಕ, ತಮಿಳುನಾಡು, ಆಂಧ್ರಪ್ರದೇಶ, ಗುಜರಾತು, ಬಂಗಾಳ, ಕಾಶ್ಮೀರ ಹೀಗೆ ಅಖಂಡ ಭಾರತದ ಶಿವಶರಣರಿದ್ದಾರೆ.

ಪ್ರಕೃತಸಂಕಲನದಲ್ಲಿ ಕರ್ಣಾಟಕದ ಸುರಗಿಯ ಚೌಡಯ್ಯ, ಮುಸುಟೆಯ ಚೌಡಯ್ಯ, ಬಾಹೂರ ಬೊಮ್ಮಯ್ಯ, ಕೋವೂರ ಬೊಮ್ಮಯ್ಯ ಮತ್ತು ತೆಲುಗು ಜೊಮ್ಮಯ್ಯನ ಜೀವಿತವನ್ನು ದರ್ಶಿಸುತ್ತೇವೆ. ಈ ವ್ಯಕ್ತಿಗಳ ಜೀವನ ಚರಿತೆಗೆ ಹರಿಹರ ನಿಗೆ ದೊರೆತ ಆಧಾರ ಏನು ಎಂಬುದು ತಿಳಿದು ಬಂದಿಲ್ಲ. ಬಹುಶಃ ಅಂದಿನ ಜನತೆ ಯಲ್ಲಿದ್ದ ದಂತಕಥೆ ಪವಾಡಗಳು ಇವನ ಆಕರವಾಗಿರಬಹುದು. ಇಲ್ಲಿನ ನಾಯಕರೆಲ್ಲರೂ ತಾವು ಕೈಕೊಂಡ ನೇಮ, ಶಿವೈಕನಿಷ್ಠೆ ಮತ್ತು ಸ್ವಧರ್ಮೋತ್ಕರ್ಷಕ್ಕಾಗಿ ಎಂಥ ಸಾಹಸದ ಕೆಲಸವನ್ನು ಮಾಡಿದ್ದಾರೆ! ಈ ರಗಳೆಗಳಲ್ಲಿ ನಾವು ಕಾಣುವ ಅನ್ಯಮತದ್ವೇಷ ಅಂದಿನ ಸಮಾಜದ ವಸ್ತುನಿಷ್ಠ ಚಿತ್ರಣ ಮಾತ್ರ. ಈ ರಗಳೆಗಳನ್ನು ಓದಿ ಹರಿಹರ ಮತೀಯ ಕವಿ ಎನ್ನುವ ತೀರ್ಮಾನಕ್ಕೆ ಬಂದರೆ ಅದು ಅವನಿಗೆ ಎಸಗಬಹುದಾದ ಘೋರ ಅಪಚಾರ. ಬಸವರಾಜದೇವರ ರಗಳೆ, ನಂಬಿಯಣ್ಣನ ರಗಳೆ, ಮಲುಹಣನ ರಗಳೆಗಳನ್ನು ಓದಿದಾಗ, ಏಕಾಂತ ರಾಮಯ್ಯನ ರಗಳೆಯನ್ನು ಅಬ್ಬಲೂರು ಶಾಸನದೊಂದಿಗೆ ಅಭ್ಯಾಸ ಮಾಡಿದಾಗ ಆತ ಪಾತ್ರಚಿತ್ರಣದಲ್ಲಿ ಘಟನಾನಿರೂಪಣೆಯಲ್ಲಿ ಎಷ್ಟು ವಸ್ತುನಿಷ್ಠನಾಗಿದ್ದಾನೆ ಎನ್ನುವ ಅರಿವು ಮೂಡುತ್ತದೆ. ಒಂದು ಧರ್ಮ ಪ್ರಬಲವಾಗಿದ್ದ ಅದೇ ಸಮಯದಲ್ಲಿ ಮತ್ತೊಂದು ಧರ್ಮ ಪ್ರವರ್ಧಮಾನಕ್ಕೆ ಬರುವಾಗ ಅನ್ಯಮತದ್ವೇಷ ಮೊದಲಾದ ಸಂಗತಿಗಳು ಅಸಹಜವೂ ಅಲ್ಲ, ಅಪರೂಪವೂ ಅಲ್ಲ. ಈ ಹಿನ್ನೆಲೆಯಲ್ಲಿ ಪ್ರಕೃತಸಂಕಲನದ ರಗಳೆಗಳನ್ನು ನೋಡುವುದು ಸೂಕ್ತ.

## II ಕಥಾಸಾರ

### ೧ ಸುರಗಿಯ ಚೌಡಯ್ಯ *

ಉತ್ತರದಿಕ್ಕಿನ ಶಿವಪುರದಲ್ಲಿ ಚೌಡಯ್ಯನೆಂಬ ಶಿವಭಕ್ತನಿದ್ದನು. ಅವನು ಅನನ್ಯ ಭಕ್ತಿಯಿಂದ ಶಿವನನ್ನು ಆರಾಧಿಸುತ್ತಿದ್ದನು. ಹೀಗಿರುವಲ್ಲಿ ಒಮ್ಮೆ ಚೌಡಯ್ಯನು ಶುದ್ಧಾಂಗನಾಗಿ ಅಗ್ಘವಣಿ ಹೂವುಗಳನ್ನು ತೆಗೆದುಕೊಂಡು ಶಿವನನ್ನು ಕಾಣುವ ತವಕದಿಂದ ದೇವಾಲಯವನ್ನು ಪ್ರವೇಶಿಸಿದನು. ಆಗ ದೇವಾಲಯದಲ್ಲಿ ಜನಸಂದಣಿ ದಟ್ಟವಾಗಿದ್ದು ಚೌಡಯ್ಯನಿಗೆ ಶಿವನನ್ನು ಕಾಣಲಾಗಲಿಲ್ಲ. ಇದರಿಂದ ಮನನೊಂದ ಚೌಡಯ್ಯನು 'ಹರಹರ ನಮಶ್ಶಿವಾಯ' ಎನ್ನುತ್ತ ಶಿವನನ್ನು ಕಾಣುವ ಹಂಬಲದಿಂದ ಮಧ್ಯಾಹ್ನದವರೆಗೂ ಅಲ್ಲಿಯೇ ಕಾಯುತ್ತಿದ್ದನು. ಜನಸಂದಣಿ ಕರಗಿದ ಮೇಲೆ ಶಿವನ ಮುಂದೆ ನಿಂತು ನಾನಾ ಪರಿಯಿಂದ ಸ್ತುತಿಸಿ ಶಿವನನ್ನು ನೋಡದೆ ತಾನು ಬದುಕುವುದು ಸಾಧ್ಯವೇ ಇಲ್ಲವೆಂದು ಶಿವನಿಗೆ ಬಿನ್ನೈಸಿಕೊಂಡನು. ಅಲ್ಲದೆ ತಾನು 'ಶಿವನನ್ನು ನೋಡುವ ನೋಟಕ್ಕೆ ಅಡ್ಡ ಬಂದವರನ್ನು ಅಲಗಿನಿಂದ ಕತ್ತರಿಸುವೆನು' ಎಂಬ ಪ್ರತಿಜ್ಞೆಯನ್ನು ಮಾಡಿ ಆ ನಿಯಮವನ್ನು ಪರಿಪಾಲಿಸಿಕೊಂಡು ಬರುತ್ತಿದ್ದನು.

ಒಂದು ದಿನ ಶಿವನು ಚೌಡಯ್ಯನ ಕನಸಿನಲ್ಲಿ ಬಂದು 'ಹಸಿದೆನೆಲೆ ಮಗನೆ ಹಸಿದೆಂ ಕಂದ' ಎಂದು ಹೇಳಿದನು. ಮರುದಿನ ಚೌಡಯ್ಯನು ನಾಗಕುಂಡಲನಿಗಾಗಿ ಓಗರ, ಮೇಲೋಗರ, ದಿವ್ಯಾನ್ನ, ಅಮೃತಾನ್ನಗಳನ್ನು ಸಿದ್ಧಮಾಡಿಸಿ ದೇವಾಲಯಕ್ಕೆ ಬಂದು ಶಿವನ ಮುಂದಿಟ್ಟು ಆರೋಗಿಸಬೇಕೆಂದು ಪರಿಪರಿಯಾಗಿ ಬೇಡಿಕೊಂಡನು. ಆದರೆ ಚೌಡಯ್ಯನ ಇಚ್ಛೆಯಂತೆ ಶಿವನು ಆರೋಗಿಸದಿರುವುದನ್ನು ಕಂಡ ಆತನು ಕತ್ತಿಯನ್ನು ಹಿರಿದು ಕತ್ತನ್ನು ಕತ್ತರಿಸಿಕೊಳ್ಳಲು ಸಿದ್ಧನಾದನು. ಕತ್ತಿಯು ಕತ್ತನ್ನು ಸಂಧಿಸುವಷ್ಟರಲ್ಲಿಯೇ ಶಿವಲಿಂಗ ದಿಂದ ಒಂದು ಹಸ್ತ ಮೂಡಿಬಂದು ಮುಂದಿದ್ದ ಆಹಾರವನ್ನು ತೆಗೆದುಕೊಂಡು ಪಂಚವದನ ಗಳಿಗೂ ನೀಡಿತು. ಇದನ್ನು ನೋಡಿದ ಚೌಡಯ್ಯನು ಆನಂದತುಂದಿಲನಾದನು. ಹೀಗೆ ಸುರಗಿಯ ಚೌಡಯ್ಯ ಶಿವನಿಗೆ ಆರೋಗಣೆಯನ್ನು ನಡೆಸುತ್ತ ಶಿವಭಕ್ತರಿಗೆ ಬೇಡಿದ್ದನ್ನಿತ್ತು ತಣಿಸುತ್ತಿದ್ದನು.

---

* ತುತ್ತುಗಳನಳವಡಿಸಿ ನೀಡಲು
ತುತ್ತು ತುತ್ತಿಗೆ ಶಂಭು ನೀಡಿಕೊ
ಳುತ್ತವಾರೋಗಿಸಿ ಸುರಗಿಚವುಡಯ್ಯನಂ ಮೆಚ್ಚಿದ॥

(ಬಸವ ಪುರಾಣ ಸಂಧಿ ೪೪–ಸೂಚನೆ)

ಇವನು ವಚನಗಳನ್ನು ಬರೆದಿದ್ದಾನೆಯೋ ಇಲ್ಲವೋ ಗೊತ್ತಿಲ್ಲ. ಮರುಳುಶಂಕರ ದೇವನು "ಘನಮಹಾತ್ಮರು ಸುರಗಿಯ ಚೌಡಯ್ಯ ತಂದೆಗಳು ಬಲ್ಲ, ನಾನೆತ್ತ ಬಲ್ಲೆನಯ್ಯ" ಎಂದು ಮುಗಿಯುವ ವಚನದಲ್ಲಿ ಇವನ ಹೆಸರನ್ನು ಹೇಳಿದ್ದಾನೆ.

(ಕವಿಚರಿತ್ರೆ (1972) ಅನುಬಂಧ II ಪುಟ–96)

ಒಂದು ದಿನ ಚೌಡಯ್ಯನು ನಸುಕಿನಲ್ಲೆ ಎದ್ದು ಮಿಂದು ಶುಚಿರ್ಭೂತನಾಗಿ ದೇವಾಲಯವನ್ನು ಪ್ರವೇಶಿಸಿದನು. ಅಷ್ಟರಲ್ಲಿ ಇವನ ನೇಮವನ್ನು ಅರಿಯದ ಹೊಸಬರಿಬ್ಬರು ಶಿವನಿಗೆ ಅಡ್ಡವಾಗಿ ನಿಂತಿದ್ದರು. ಇದನ್ನು ನೋಡಿದ ಆತನು ತನ್ನ ಕತ್ತಿಯಿಂದ ಇಬ್ಬರನ್ನು ಕತ್ತರಿಸಿ ಹಾಕಿ ಶಿವನನ್ನು ಪರಿಪರಿಯಾಗಿ ಸ್ತುತಿಸುತ್ತಾ ನಿಂತನು. ಅದನ್ನು ಕಂಡ ಪುರ ಜನರು ದೇವಾಲಯದ ಮುಂದೆ ನೆರೆದು ನಾನಾ ರೀತಿಯಲ್ಲಿ ಮಾತನಾಡಿಕೊಳ್ಳುತ್ತಿದ್ದರು ಚೌಡಯ್ಯನು ತನ್ನ ಪೂಜೆಯನ್ನು ಮುಗಿಸಿಕೊಂಡು ಹೊರಬರುವಾಗ ಸತ್ತುಬಿದ್ದಿದ್ದ ಶಿವ ಭಕ್ತರನ್ನು ನೋಡಿ 'ಏಳೇಳು' ಎನ್ನಲು ಇಬ್ಬರೂ ಎದ್ದುನಿಂತು ಕೈಮುಗಿದರು. ಈ ಪವಾಡವನ್ನು ನೋಡಿದ ಜನ ಆಶ್ಚರ್ಯಗೊಂಡರು. ಅಷ್ಟರಲ್ಲಿ ಪುಷ್ಪವೃಷ್ಟಿಯಾಗಿ ದೇವ ದುಂದುಭಿನೊಳಗಿತು. ಪುಷ್ಪಕ ವಿಮಾನ ಬಂದು ಚೌಡಯ್ಯನನ್ನು ಆ ಭಕ್ತರಿಬ್ಬರ ಸಮೇತ ಕೈಲಾಸಕ್ಕೆ ಕೊಂಡೊಯ್ದಿತು. ಶಿವನು ಹರಭಕ್ತರಿಬ್ಬರಿಗೂ ಸಾಲೋಕ್ಯಪದವಿಯನ್ನೂ ಚೌಡಯ್ಯನಿಗೆ ಗಣಪದವಿಯನ್ನೂ ಕೊಟ್ಟು ಸತ್ಕರಿಸಿದನು.

**೨ ಮುಸುಟಿಯ ಚೌಡಯ್ಯ ***

ಮುಸ್ಟುಟಿ ಎಂಬ ಗ್ರಾಮದಲ್ಲಿ ಚೌಡಯ್ಯನೆಂಬ ಶಿವಶರಣನಿದ್ದನು. ಅವನು ಸದಾಚಾರಸಂಪನ್ನನಾಗಿ ನಿತ್ಯನೇಮಗಳನ್ನು ನಿಷ್ಠೆಯಿಂದ ಪಾಲಿಸುತ್ತಿದ್ದನು. ಆತನಿಗೆ ಕನಸು ಮನಸಿನಲ್ಲಿ ನೆನಹು ನಿಷ್ಠೆಯಲ್ಲಿ ನಡೆವಲ್ಲಿ ನುಡಿವಲ್ಲಿ ಕೊಡುವಲ್ಲಿ ಕೊಂಬಲ್ಲಿ 'ಶರಣು ಶರಣಾರ್ಥಿ' ಎಂಬುದೇ ನೇಮವಾಗಿದ್ದಿತು.

ಒಂದು ದಿನ ಆತನು ಶಿವನ ಮಜ್ಜನಕ್ಕೆ ಅಗ್ಘವಣಿಯನ್ನು ತೆಗೆದುಕೊಂಡು ಹೋಗು ತ್ತಿರುವಾಗ ದಾರಿಯಲ್ಲಿ ಭಕ್ತರು ಒಬ್ಬ ಭಕ್ತನನ್ನು ವಿಮಾನದಲ್ಲಿರಿಸಿಕೊಂಡು ರುದ್ರ ಭೂಮಿಗೆ ಒಯ್ಯುತ್ತಿದ್ದುದನ್ನು ನೋಡಿದನು. ಕೂಡಲೆ ಆತನು 'ಶರಣಾರ್ಥಿ' ಎಂದು ಹೇಳಿ ಆ ಶಿವಭಕ್ತನನ್ನು ಇಳಿಸಬೇಕೆಂದೂ ಇಲ್ಲದಿದ್ದರೆ ತಾನು ಅಳಿಯುವೆನೆಂದೂ ಹೇಳಿ ಕತ್ತಿ ಯನ್ನು ಹಿರಿದನು. ಆಗ ಆ ಶಿವಭಕ್ತನನ್ನು ಕಟ್ಟಿದ ಕಟ್ಟುಗಳೆಲ್ಲವೂ ಚಿಟಚಿಟಲ್ಲೆನ್ನುತ್ತ ಹರಿದುಹೋಗಿ ಆತನು ವಿಮಾನದಿಂದ ಇಳಿದು ಬಂದನು; ಅಂದಿನಿಂದ ಸತ್ತ ಜಂಗಮರನ್ನು ಒಲಿದು ಎತ್ತುವುದನ್ನೇ ನೇಮವಾಗಿ ಕೈಕೊಂಡನು.

---

* ಅಸುಗಳೆದ ತಾಪಸಗೆ ಗೂಳಿಗೆ
ಬಿಸಜನಯನೆಗೆ ಕೃತಕರೂಪಿಂ
ಗೊಸೆದು ಜೀವವನಿತ್ತು ಮೆಱೆದನು ಮುಸುಟಿ ಚೌಡಯ್ಯ
(ಬಸವಪುರಾಣ ಸಂಧಿ ೩೨–ಸೂಚನೆ)

ಇವನು ವಚನಗಳನ್ನು ಬರೆದಿದ್ದಾನೆಯೋ ಇಲ್ಲವೋ ತಿಳಿಯದು (ಕವಿಚರಿತ್ರೆ (1972) ಅನುಬಂಧ II ಪುಟ—96)

ಮತ್ತೊಂದು ದಿನ ಚೌಡಯ್ಯನು ಅಗ್ಘವಣಿ ಹೂಗಳನ್ನು ತರುತ್ತಿರಲು ಸತ್ತ ವೃಷಭ ವೊಂದನ್ನು ದಾರಿಯಲ್ಲಿ ಕಂಡನು. 'ಬಸವನ ಶರೀರಕ್ಕೆ ನೋವುಂಟೆ ಸಾವುಂಟೆ' ಎಂದು ಭಾವಿಸಿ 'ಬಸವಯ್ಯ, ಬಸವೇಶ್ವರ ಏಳು' ಎಂದಾಕ್ಷಣವೇ ಅದು ಮುರಿದೆದ್ದು ಬಂದಿತು. ಮತ್ತೊಂದು ದಿನ ಹುಡುಗರು ಆಟವಾಡುತ್ತಿದ್ದಾಗ 'ಅಲ್ಲಿ ಗೂಳಿಯ ಕಲ್ಲಿದೆಮಗೆ ನೆಲೆಗಿ ಗೊತ್ತೆಂದು' ಮಾತಾಡುತ್ತಿದ್ದುದನ್ನು ಕೇಳಿ ಅವರಿಂದ ನಿಜವಾದ ಬಸವವೊಂದನ್ನು ಅಲ್ಲಿ ನಿಕ್ಷೇಪಿಸಿದ ಅನಂತರ ಅದು ಗೂಳಿಯ ಕಲ್ಲಾಯಿತೆಂದು ತಿಳಿದು 'ಆ ಬಸವನನ್ನು ಮತ್ತೆ ಬದುಕಿಸುವೆನು, ಇಲ್ಲದಿದ್ದಲ್ಲಿ ಮಡಿಯುವೆನು' ಎಂದು ಹೇಳಿ ಕಲ್ಲಿನ ಬಳಿಗೆ ಬಂದು ಶಿವ ನನ್ನು ಪ್ರಾರ್ಥಿಸಿ ಸುರಗಿಯನ್ನು ಹಿರಿದು 'ಎಲೆಲೆಲೆಲೆ ಬಸವ ಪೋಜಿಮಡು ಪೋಜಿಮಡೆ ನ್ನಾಣೆ, ಎಲೆಲೆ ಇನ್ನಿರ್ದಡೆ ಮಹೇಶ್ವರರ ಹಿರಿಯಾಣೆ' ಎಂದನು. ಕೂಡಲೆ ಭೂಮಿಯ ಒಳಗಿನಿಂದ ಬ್ರಹ್ಮಾಂಡವೇ ಅಲುಗಾಡಿದಂತಹ ಶಬ್ದ ಉಂಟಾಯಿತು. ಭರ್ಗವಾಹನದ ತುದಿಗೋಡು ಕಾಣಬಂದು ಬಸವ ಭೂಮಿಯನ್ನು ಒಡೆದು ಹೊರಬಂದಿತು. ಇದರಿಂದ ಸಂತಸಗೊಂಡ ಚೌಡಯ್ಯನು ಬಸವನನ್ನು ನಾನಾ ರೀತಿಯಲ್ಲಿ ಹಾಡಿ ಹೊಗಳಿದನು.

ಮುಸುಟೆಯ ಚೌಡಯ್ಯನು ಒಂದು ದಿನ ಬಸವ ಮತ್ತು ಭಕ್ತರೊಡಗೂಡಿ ಬರು ತ್ತಿರಲು ಫಲಭಾರದಿಂದ ಜಗ್ಗಿದ್ದ ಇಟ್ಟೆಯ ಮರವನ್ನು ಕಂಡರು. ಹಾಗೆ ಕಂಡ ಭಕ್ತರು ಆ ಇಟ್ಟೆಯ ಹಣ್ಣುಗಳು ಶಿವನ ಆರೋಗಣೆಗೆ ಬೇಕೆಂದು ಚೌಡಯನನ್ನು ಕೇಳಿದರು. ನಿಜವಾಗಿ ಆ ಹಣ್ಣುಗಳು ವಿಷದಿಂದ ಕೂಡಿದ್ದುವು. ಚೌಡಯ್ಯನು ತನ್ನ ಸುರಗಿಯನ್ನು ಆ ಮರಕ್ಕೆ ಸೋಕಿಸುತ್ತಿದ್ದಂತೆಯೆ ಅವೆಲ್ಲವೂ ಅಮೃತಮಯ ಫಲಗಳಾದುವು. ಚೌಡಯ್ಯ ಶರಣರ ಜೊತೆಯಲ್ಲಿ ಒಮ್ಮೆ ಹೋಗುತ್ತಿದ್ದಾಗ ದಾರಿಯಲ್ಲಿ ಒಂದು ದೊಡ್ಡ ನದಿ ಅಡ್ಡ ಸಿಕ್ಕಿತು. ಚೌಡಯ್ಯ 'ಎಲೆ ಜಲಧಿ ನಿಲ್ಲೆಂದು' ಸುರಗಿಯನ್ನು ಝಳಪಿಸಲು ಅದು ಎರಡು ಭಾಗವಾಯಿತು. ಆ ನದಿಯಲ್ಲಿ ಏಳು ದಿನಗಳನ್ನು ಕಳೆದು ಮುಂದೆ ಹೋದರು.

ಒಮ್ಮೆ ಜೈನರೆಲ್ಲರೂ ಸೇರಿ ಚೌಡಯ್ಯನ ನಿಷ್ಠೆಯನ್ನು ಪರೀಕ್ಷಿಸಲೋಸುಗ ಒಂದು ಗೋಣಿಯ ಚೀಲವನ್ನು ಪುರುಷನ ಆಕಾರದಲ್ಲಿ ಹೊಲೆದು ಅದಕ್ಕೆ ಜಂಗಮ ವೇಷವನ್ನು ತೊಡಿಸಿ ವಿಮಾನದಲ್ಲಿರಿಸಿ ಊರ ಹೊರಗಿನ ಪಾಳುದೇಗುಲದಲ್ಲಿಟ್ಟು 'ಸತ್ತು ನಾರುತ್ತಿರು ವವನನ್ನು ಎತ್ತುವವರು ಯಾರೂ ಇಲ್ಲ ಚೌಡಯ್ಯನ ಕೇರಿಗೆ ತೆಗೆದುಕೊಂಡು ಹೋಗಿ' ಎಂದು ಕೂಗಾಡುತ್ತಿದ್ದರು. ಅದನ್ನು ಕೇಳಿದ ಚೌಡಯ್ಯನಿಗೆ ಪರಸಮಯಿಗಳ ಕುಹಕ ಅರ್ಥವಾಗಿ ಈ ವೇಷವನ್ನೇ ನಿಜವಾಗಿಸುವೆನೆಂದು ಶಂಕರನನ್ನು ಧ್ಯಾನಿಸಿ ಆ ಚೀಲದ ಆಕಾರದಲ್ಲಿದ್ದ ಶರಣನನ್ನು ನುಡಿಸಿದನು. ಆ ಶರಣ ರೂಪಿಗೆ ಚೈತನ್ಯ ಬಂದಿತು. ನಭದಿಂದ ಪುಷ್ಪವೃಷ್ಟಿಯಾಯಿತು. ಚೌಡಯ್ಯನು ತನಗಾಗಿ ಬಂದ ವಿಮಾನದಲ್ಲಿ ಕುಳಿತು ಕೈಲಾಸಕ್ಕೆ ತೆರಳಿ ಗಣಪದವಿಯನ್ನು ಪಡೆದನು.

## ೩ ತೆಲುಗು ಜೊಮ್ಮಯ್ಯ*

ಕಲ್ಯಾಣಪಟ್ಟಣದಲ್ಲಿ ಜೊಮ್ಮಯ್ಯನೆಂಬ ಒಬ್ಬ ಶಿವಭಕ್ತನಿದ್ದನು. ಅವನು ಭೀಮನಾಥನ ಆರಾಧಕನಾಗಿದ್ದನು. ಒಂದು ದಿನ ಭೀಮನಾಥನು ಅವನ ಕನಸಿನಲ್ಲಿ ಬಂದು ಆ ಪಟ್ಟಣಕ್ಕೆ ಹತ್ತು ಯೋಜನ ದೂರದಲ್ಲಿರುವ ಕಾಡಿನಲ್ಲಿ ಕಾರಣಿಕ ಋಷಿಗಳು ಶಾಪಹತರಾಗಿ ಮೃಗರೂಪದಿಂದಿರುವರೆಂದೂ ನೀನು ಆ ಮೃಗಗಳನ್ನು ಬೇಟೆಯಾಡುವುದರ ಮೂಲಕ ಅವರಿಗೆ ಮೋಕ್ಷವನ್ನು ಒದಗಿಸಬೇಕೆಂದೂ ಹೇಳಿದನು. ಅದೇ ಮೇರೆಗೆ ಜೊಮ್ಮಯ್ಯ ಪ್ರತಿದಿನ ಬೇಟೆಯಾಡುತ್ತಿದ್ದು ಋಷಿಯರ ಕರ್ಮವನ್ನು ತೀರಿಸುತ್ತಿದ್ದನು. ಭಕ್ತರ ಸೇವಾರ್ಥವಾಗಿ ಪೆರ್ಮಾಡಿರಾಯನಲ್ಲಿ ಒಂದು ಸಾವಿರಹೊನ್ನಗಳ ವೃತ್ತಿಯನ್ನು ಕೈಕೊಂಡನು. ಹೀಗೆ ಜೋಳವಾಳಿಯಲ್ಲಿ ಧರಾನಾಥನಿಗೂ ವೇಳೆವಾಳಿಯಲ್ಲಿ ಭೀಮನಾಥನಿಗೂ ಸೇವೆಯನ್ನು ಸಲ್ಲಿಸುತ್ತಿದ್ದನು. ಆದರೆ ಪೆರ್ಮಾಡಿರಾಯನಿಗೆ ನಮಸ್ಕರಿಸುತ್ತಿರಲಿಲ್ಲ, ಆತನನ್ನು ಲೆಕ್ಕಿಸುತ್ತಿರಲಿಲ್ಲ. ಜೊಮ್ಮಯ್ಯನ ಕೀರ್ತಿ ಪೆರ್ಮಾಡಿರಾಯನ ಅರಸಿ ಲಕುಮಾದೇವಿಯ ಕಿವಿಯನ್ನು ಮುಟ್ಟಿತು. ಶಿವಭಕ್ತೆಯಾದ ಅವಳು ಅವನ ಏಕನಿಷ್ಠೆಯನ್ನರಿತು ಅವನಿಗೆ ಪೂಜಾಸಾಮಗ್ರಿಗಳನ್ನು ಒದಗಿಸುತ್ತಿದ್ದಳು. ಇವೆಲ್ಲವುಗಳಿಂದ ಜೊಮ್ಮಯ್ಯ ಶಿವನನ್ನು ಪರಿಪರಿಯಾಗಿ ಪೂಜಿಸುತ್ತಿದನು.

ಒಂದು ದಿನ ಜೊಮ್ಮಯ್ಯ ಶಿವನನ್ನು ನಾನಾ ರೀತಿಯಲ್ಲಿ ಪೂಜಿಸಿ ಅರಮನೆಗೆ ಬಂದನು. ಅಲ್ಲಿ ಅರಸನು ಒಂದು ಕಡೆ ವಿಷ್ಣುಪೂಜೆಯನ್ನು ಮಾಡುತ್ತಿದ್ದನು. ಜೊಮ್ಮಯ್ಯ ಹೊರಗೆ ನಿಂತಿದ್ದನು. ಆಗ ಮತ್ತೊಂದು ಕಡೆ ಒಬ್ಬ ಪುರಾಣಿಕ ಪಂಚಮುಖನ ನಿಂದೆಯನ್ನು ಮಾಡುತ್ತ ಕಟ್ಟುಕ ಪುರಾಣವನ್ನು ಓದಿ ಹೇಳುತ್ತಿದ್ದನು. ಇದನ್ನು ಕೇಳಿದ ಜೊಮ್ಮಣ್ಣನು ಕೋಪಗೊಂಡು ಆ ಶಿವದ್ರೋಹಿಯನ್ನು ಇರಿದು ಕೊಂದುಬಿಟ್ಟನು. ಶಿವನಿಂದೆಯನ್ನು ಕೇಳಿದ್ದಕ್ಕಾಗಿ ಪರಿತಪಿಸುತ್ತ ತನ್ನ ಮನೆಗೆ ಹೋದನು.

---

* ವರಮೃಗಾಕೃತಿಗಳಿನಡವಿಯೊಳು
ಚರಿಸುವಾ ಗಂಧರ್ವರಂ ಸಂ
ಹಂಸಿ ಶಿವಲೋಕಕ್ಕೆ ಕಳುಹಿದನು ತೆಲುಗು ಜೊಮ್ಮಯ್ಯಂ

(ಬಸವ ಪುರಾಣ ಸಂಧಿ ೩೪—ಸೂಚನೆ.)

ತೆಲುಗು ಜೊಮ್ಮಯ್ಯ—ಸು. 1160 : ಈತನ ಅಂಕಿತವು 'ತೆಲುಗೇಶ್ವರ' ಎಂದಿರುವಂತೆ ತೋರುತ್ತದೆ. ವಚನ—ಕಾವ ಸನ್ನದ್ಧನಾಗಿ ತಾ ಚೆಲುವನಾದಡೆ ಕಾಮಿನೀಜನವೆಲ್ಲ ಮೆಚ್ಚಬೇಕು. ವೀರನಾದಡೆ ವೈರಿಗಳು ಮೆಚ್ಚಬೇಕು. ಕೂಳನಾದಡೆ ತನ್ನ ತಾ ಮೆಚ್ಚಿಕೊಂಬ ಎನ್ನ ದೇವ ತೆಲುಗೇಶ್ವರನಲ್ಲಿ ತಾನು ಭಕ್ತನಾದಡೆ ದೇವರು ಮೆಚ್ಚಿ ಜಗವು ತಾ ಮೆಚ್ಚುವುದು.

(ಕವಿಚರಿತ್ರೆ (1972) ಪುಟ—383)

ಇತ್ತ ಪೆರ್ಮಾಡಿರಾಯನು 'ಪಾರ್ವನೇಕೆ ಪುರಾಣಮಂ ಪೇಳದುಸುರದಿರ್ದಪಂ' ಎಂದು ಪರಿಚಾರಕರನ್ನು ಕೇಳಿದನು. ಅವರು ನಿಜಸಂಗತಿಯನ್ನು ತಿಳಿಸಲು ಹೆದರಿದರು' ಕೈಸನ್ನೆ ಬಾಯ್ಸನ್ನೆಯಿಂದ ಜೊಮ್ಮಯ್ಯ ಬ್ರಾಹ್ಮಣನನ್ನು ಕೊಂದನೆಂದು ತಿಳಿಸಿದರು ಅರಸನು ಅರ್ಚಿಸುತ್ತಿದ್ದ ವಿಷ್ಣುಪ್ರತಿಮೆ ತನ್ನಿಂದಾದ ಶಿವನಿಂದೆಗೆ ಕಣ್ಣೀರಿಕ್ಕುವುದನ್ನು ಕಂಡ ಅರಸು ಹೊರಬಂದು ಸತ್ತ ಬ್ರಾಹ್ಮಣನನ್ನು ನೋಡಿ ಕೋಪೋದ್ರಿಕ್ತನಾಗಿ ಜೊಮ್ಮಣ್ಣನನ್ನು ಕರೆಯ ಕಳುಹಿಸಿದನು.

ಇದನ್ನು ಅರಿತ ಲಕುಮಾದೇವಿ ಶಿವಭಕ್ತನಿಗೆ ಜಿಹ್ವಾವಮಾನವಾಗಬಾರದು ಎಂದು ಭಾವಿಸಿ, ಎಂದೂ ನಮಸ್ಕರಿಸದ ಜೊಮ್ಮಣ್ಣ ಇಂದು ಅರಸನಿಗೆ ನಮಸ್ಕರಿಸಲು ಆತನು ಮನ್ನಿಸುವನೆಂದು ತಿಳಿದು, ತನ್ನ ಪ್ರಾಣಲಿಂಗವನ್ನು ಅರಸನು ಅರಿಯದಂತೆ ಸಿಂಹಾಸನದ ಹಿಂದೆ ಹಿಡಿದು ನಿಂತಳು. ಕಲಿಯುಗ ವೀರಭದ್ರ ಜೊಮ್ಮಣ್ಣನು ಸಭೆಗೆ ಬಂದೊಡನೆಯೇ ಅರಸಿಯ ಕೈಯಲ್ಲಿದ್ದ ಲಿಂಗವನ್ನು ಕಂಡನು. ಕೂಡಲೇ ನಮಸ್ಕರಿಸಲು ಕೈಯನ್ನು ಎತ್ತುತ್ತ ಒಲ್ಲದೆ "ಭವಿಯ ಪಿಂದಿವಲೇಕೆ ಪೊಡಮಡಿಸಿಕೊಳಲೊಲಿವಡೆ ಕೆಲಕ್ಕೆ ಬಿಜಯಂಗೆಯ್ವುದು" ಎನ್ನಲು ಶಿವಲಿಂಗ ಸಿಂಹಾಸನವನ್ನು ಬಿಟ್ಟು ಗಗನಾಸನವನ್ನು ಸೇರಿತು. ಜೊಮ್ಮಯ್ಯ ಆ ಲಿಂಗಕ್ಕೆ ನಮಸ್ಕಾರ ಮಾಡಿ ಸೆಜ್ಜೆಗೆ ಸೇರಿಸಿದನು.

ಅರಸನು 'ನಿರಪರಾಧಿ ಪುರಾಣಭಟ್ಟನನ್ನು ಕೊಂದುದೇಕೆ' ಎಂದು ಜೊಮ್ಮಯ್ಯನನ್ನು ಪ್ರಶ್ನಿಸಿದನು. ಅದಕ್ಕೆ ಜೊಮ್ಮಯ್ಯನು 'ಪುರಾಣಭಟ್ಟನನ್ನು ಕೊಲ್ಲಲಿಲ್ಲವೆಂದೂ ಶಿವನಿಂದೆ ಮಾಡಿ ಹುಸಿನುಡಿದ ಪಾತಕಿಯನ್ನು ಕೊಂದುದಾಗಿ'ಯೂ ತಿಳಿಸಿದನು. ಇದಕ್ಕೆ ಪ್ರತ್ಯಕ್ಷವನ್ನು ತೋರಿಸು ಎನ್ನಲು, ಜೊಮ್ಮಯ್ಯನು ಹೆಣವನ್ನು ಮುಸುಕಿಟ್ಟು ತೆಗೆಯಲು ಅದು ಹುಳುವಿನ ರಾಶಿಯಾಗದಿದ್ದರೆ ನಾನು ಅಪರಾಧಿ, ನನ್ನನ್ನು ಶಿಕ್ಷಿಸಬಹುದು ಎಂದನು. ಅದಕ್ಕೆ ಒಪ್ಪಿದ ರಾಜನು ಹಾಗೆಯೇ ಮಾಡಿದಾಗ ವಿಲಿವಿಲಿಸುತ್ತಿದ್ದ ಹುಳುವಿನ ರಾಶಿ ಕಂಡಿತು. ಪೆರ್ಮಾಡಿರಾಯನು ಜೊಮ್ಮಯ್ಯನನ್ನು ಕೈಮುಗಿದು ಕೊಂಡಾಡಿ ವರುಷವೊಂದಕ್ಕೆ ಹನ್ನೆರಡುಸಾವಿರ ಹೊನ್ನುರನ್ನಗಳನ್ನು ಶಿವಪುರವನ್ನೂ ದಾನವಾಗಿ ಕೊಟ್ಟನು.

ಭೀಮನಾಥನ ಅಪ್ಪಣೆಯಂತೆ ಕಾರಣಿಕ ಮೃಗಗಳನ್ನು ಬೇಟೆಯಾಡಿ ತಾರಾದ್ರಿಗೆ ಕಳಿಸುತ್ತಿದ್ದ ಜೊಮ್ಮಣ್ಣನ ಶಿವೇಕನಿಷ್ಠೆಯನ್ನು ಕೇಳಿ ಕೊಂಡಗೂಳಿಯ ಕೇಶಿರಾಜನು 'ಎಲ್ಲವುಂ ಲೇಸಾಯ್ತು ಬೇಂಟೆಯೊಂದೇ ಪೊಲ್ಲ, ಅಲ್ಲಿ ಮಾಣಿಪೆ ಅಭವ ಭಕ್ತಂಗಿದಲ್ಲ' ಎಂದು ತಮ್ಮ ಊರಿಂದ ಹೊರಟು ಜೊಮ್ಮಣ್ಣನ ಮನೆಯ ಮುಂದೆ ಇಳಿದನು. ಒಳಗೆ ಹೋಗಿ ನೋಡಲು ಎಲ್ಲೆಲ್ಲೂ ಪಿಶಿತಮಾಲೆಗಳೇ ಕಂಡುಬಂದವು. ಹೇಸಿದ ಕೇಶಿರಾಜ ಊರ ಮುಂದಿನ ಶಿವಾಲಯದಲ್ಲಿ ಬೀಡುಬಿಟ್ಟನು. ಹತ್ತೆಂಟು ಮೃಗಶರೀರಗಳೊಡನೆ ಮನೆಗೆ ಬಂದ ಜೊಮ್ಮಣ್ಣ 'ಬಂದರುಂಟೇ ಶಿವನ ಭಕ್ತರರಸುತಲಿಂದು' ಎಂದು ಪತ್ನಿಯನ್ನು ಕೇಳಿದನು. ಅವಳು ನಡೆದ ಸಂಗತಿಯನ್ನು ತಿಳಿಸಿದಳು.

ಸಂತೋಷಗೊಂಡ ಜೊಮ್ಮಣ್ಣ ಶಿವಾಲಯಕ್ಕೆ ಬಂದನು. ಕೇಶಿರಾಜನನ್ನು ಕಂಡು ಅಪ್ಪಿಕೊಂಡು 'ಎನ್ನ ಮನೆಯಿರ್ದಂತೆ ಇಲ್ಲಿ ನೀವಿರ್ಪಿರೇ ತಂದೆ ಬಿಜಯಂಗೆಯ್ವುದು' ಎಂದು ಜೊಮ್ಮಣ್ಣನು ಪ್ರಾರ್ಥಿಸಿದನು. ದಣ್ಣಾಯಕರು ಅದಕ್ಕೆ ಸಮ್ಮತಿಸಲಿಲ್ಲ. ಹೊಸೆದ ಹೂವಿನ ಹಾಗೆ ನೊಂದುಕೊಂಡ ಜೊಮ್ಮಯ್ಯ ಸೋಮನಾಥನಿಗೆ ಭಕ್ತರನ್ನು ಕಾವಲಿಟ್ಟು ಮನೆಗೆ ಹಿಂದಿರುಗಿದನು. ಆತನು ಹೋದ ಮೇಲೆ ಅವನನ್ನು ಸಂತೈಸಲು ಕೇಶಿರಾಜ ದಣ್ಣಾಯಕರು ಹೋಗುತ್ತ ಊರ ಹೊರಗಿನ ಕೆರೆಯ ಏರಿಯ ಮೇಲೆ ಮೃಗಜೀವನನ್ನು ಕೊಂಡುಹೋಗುವ ಗಣಸಮೂಹವನ್ನು, ಗಗನದಲ್ಲಿ ನೆಗೆಯುವ ಪುಷ್ಪಕಸಮೂಹಸನ್ನು ಕಂಡುಕಾಣದಾದರು. ಕನಸಿನಿಂದ ಎಚ್ಚತ್ತಂತೆ ಬೆರಗಾಗಿ ಶಿವನಿಳಯಕ್ಕೆ ಹಿಂತಿರುಗಿದರು. ತರುವಾಯ ಸೋಮನಾಥನನ್ನು ಕರಕೆ ಬಿಜಯಗೆಯ್ಯಿಸಲು ಕರನೀಡಿದರು. ಜೊಮ್ಮಣ್ಣನೊಡನೆ ಸೇರಿಹೋಗಿದ್ದ ಸೋಮನಾಥ ಅತ್ತಿತ್ತ ಚಲಿಸಲಿಲ್ಲ. ಮತ್ತೊಮ್ಮೆ ಕರೆಯಬಂದ ಜೊಮ್ಮಣ್ಣನಿಗೆ ದಣ್ಣಾಯಕರು 'ಸೋಮನಾಥಂ ಬರಲ್ ಬಂದಪೆಂ ನಾನೆನಲು' ಜೊಮ್ಮಣ್ಣನು 'ಇರವೇಳ್ದಡಿರ್ದ ದೇವಂ ಸೋಮನಾಥವಿಭು, ಬರವೇಳ್ದ ಬಿನ್ನೈಸೆ ಬಾರದಿರ್ಪನೆ ಶಂಭು' ಎಂದು ಕೈಗೆ ಆಲಗಿನಾಯುಧವನ್ನು ಕೊಳ್ಳಲು ದಣ್ಣಾಯಕರ ಕೈಗೆ ಲಿಂಗವು ಬಂದಿತು. ಜೊಮ್ಮಣ್ಣನರಸಿ ಎಡೆಮಾಡುತ್ತಿರಲು ಅದನ್ನು ಕಂಡ ದಣ್ಣಾಯಕರು ಮನದಲ್ಲಿ ಮಿಡುಕಿದರು. ಅದನ್ನು ತಿಳಿದ ಜೊಮ್ಮಣ್ಣ 'ಎಲೆ ಸೋಮನಾಥ ದಣ್ಣಾಯಕರ ಮನದಂತೆ, ಪಲಲನು ಪಕ್ವಾನ್ನ ತತಿಗಳಂ ಮಾಡಿಂತೆ' ಎಂದನು. ಅಂತೆಯೇ ಆಯಿತು.

ಶಿವರಾತ್ರಿ ಕಳೆದು ನಡುಹಗಲಿನವರೆಗೂ ಮೈಮರೆತುಕುಳಿತ ದಣ್ಣಾಯಕರು ಜೊಮ್ಮಣ್ಣನಿಗೆ ಬೇಟೆ ಬೇಡವೆಂದು ಹೇಳುತ್ತಿರುವಾಗ ಇತ್ತ ಕಾರಣಿಕ ಮೃಗತತಿಗಳು 'ಹೊತ್ತು ಹೋಯಿತ್ತು ಬಾರಂ ಭಕ್ತನೆಂದೆಂದು' ಮೊರೆಯಿಡುತ್ತಿರಲು 'ಇದೇನು?' ಎಂದು ದಣ್ಣಾಯಕರು ಕೇಳಿದರು. ಜೊಮ್ಮಣ್ಣನು 'ದೇವ ನೀವೆಂದಂತೆ ಒಂದೇ ದಿನದ ಬೇಂಟೆ ಕಾರಣಿಕ ಮೃಗವೆಲ್ಲ ತೀರ್ದವು' ಎಂದು ಹೇಳಿದನು. ದಣ್ಣಾಯಕರು ಕಣ್ಣುಮುಚ್ಚಿಕೊಂಡು ಶಿವನ ಮಹಿಮೆಗೆ ಮೆಚ್ಚಿ 'ಅಸಮಾಕ್ಷ ನೀನೊಲಿಯೆ ಪಾಪವೇ ಪುಣ್ಯವದು, ಒಸೆದು ನೀನೊಲಿದಂಗನೀತಿಯೇ ನೀತಿಯದು' ಎಂದರು. ಅವರನ್ನು ಊರಿಗೆ ಕಳಿಸಿ ಜೊಮ್ಮಣ್ಣನು ಭೀಮನಾಥ ಕರುಣಿಸು ಎಂದು ತನ್ನ ಬರವನ್ನೇ ಹಾರೈಸುತ್ತಿದ್ದ ಮೃಗಸಮೂಹವನ್ನು ಬೇಟೆಯಾಡಿ, ಪುಷ್ಪವೃಷ್ಟಿಯಾಗುತ್ತಿರಲು ಬಂದ ಪುಷ್ಪಕದಲ್ಲಿ ಗಗನಕ್ಕೆ ಹಾರಿದನು. ಇಂದುಧರನು ಬರಸೆಳೆದಪ್ಪಿ ಅವನಿಗೆ ಗಣಪದವನ್ನಿತ್ತನು.

೪ ಬಾಹೂರ ಬೊಮ್ಮಯ್ಯ *

ಕಲ್ಯಾಣಪುರ ಪ್ರಾಂತದ ಬಾಹೂರೆಂಬಲ್ಲಿ ಬೊಮ್ಮಿತಂದೆಯೆಂಬ ಶರಣನಿದ್ದನು. ಒಂದು ಸೋಮವಾರ ಆತನು ತ್ರಿಪುರಾಂತಕ ಪ್ರಭುವನ್ನೀಕ್ಷಿಸಿ ಬಾಹೂರಿನಿಂದ ಕಲ್ಯಾಣಕ್ಕೆ ಬಂದಾಗ ಒಬ್ಬ ವ್ಯಾಪಾರಿ ಜೋಳವನ್ನು ರಾಶಿಹಾಕಿಕೊಂಡು 'ಶಂಕರ ಗಂಡನಂ ಕೊಳ್ಳಿರೇ' ಎಂದು ಕೂಗುತ್ತಿದ್ದನು. ಅದನ್ನು ನೋಡುತ್ತ ಬೊಮ್ಮಯ್ಯ ಬರುತ್ತಿರಲು ಒಬ್ಬ ಸವಣ ಕಟಕಿಯಿಂದ 'ಜೋಳದ ಹೆಸರು ಶಂಕರ ಎಂದು ಹೇಗಾಯಿತು ? ಜೋಳದ ರಾಶಿಯನ್ನು ಓ ಎನಿಸಿದವರುಂಟೆ ?' ಎಂದನು. ಬೊಮ್ಮಯ್ಯನು ಆ ಮಾತನ್ನು ಕೇಳಿ ದಂಡಿಗೆಯಿಂದಿಳಿದು ಬಂದು ರಾಶಿಯನ್ನು ಪ್ರದಕ್ಷಿಣೆ ಮಾಡಿ ಶಿವನನ್ನು ನೆನೆದು 'ಪರಮ ಗುರುವೇ ಶಂಕರಾ ಶಂಕರಾ' ಎಂದು ಕರೆಯಲು ಜೋಳದ ರಾಶಿಯೊಳಗೆ 'ಹರುಷದಿಂದ ಓಯೆಂಬ ನುಡಿ ಮೂರು ಬಾರಿ ಆಗಲು' ಸವಣನು ಓಡಿದನು. ಶರಣರು ಸಂತಸಗೊಂಡರು. ಬೊಮ್ಮಯ್ಯ ಬಾಹೂರಿಗೆ ಹಿಂದಿರುಗಿದನು.

ಒಂದು ದಿನ ಸೋಮವಾರ ಬೊಮ್ಮಯ್ಯನು ಕಲ್ಯಾಣಕ್ಕೆ ಬಂದಾಗ ಪೆರ್ಮಾಡಿ ರಾಯನ ಆನೆ ಸಪ್ತಾವಸ್ಥೆಯ ಮದದಿಂದ ಮುಂದುಗಾಣದೆ ಕೊಂಬಿನ ಮೊನೆಯಲ್ಲಿ ಸೊಂಡಿಲನ್ನು ತೂಗಿ, ತನ್ನ ನೆರಳನ್ನೆ ಪ್ರತಿದಂತಿಯೆಂದು ಎರಗುತ್ತ ಮುನ್ನುಗ್ಗುತ್ತಿದ್ದಿತು. ಎದುರಿಗೆ ಬಂದ ಬೊಮ್ಮಯ್ಯನನ್ನು ಪಡಿಯರರು 'ತೊಲಗು ತೊಲಗು' ಎಂದರು. ಬೊಮ್ಮಯ್ಯನು ಅದನ್ನು ಲೆಕ್ಕಿಸದೆ 'ಸಡಿಫಡ ಸಾವವನ ಮನೆಯಾನೆಗೆ ಶಾಶ್ವತನ ಮನೆಯಾನೆ ತೊಲಗುವುದಲ್ಲ ತೆಗೆತೆಗೆ ನಿಲ್ಲಿತ್ತ ಬಾರದಿರುಯೆನ್ನಾಣೆ' ಎಂದು ಎತ್ತಿದ ಹಸ್ತ ನಿವಾರಣೆಗೆ ಹೂಂಕರಿಸಿ ಬರುತ್ತಿದ್ದ ಆನೆ ಮಣ್ಣಾನೆಯಂತೆ ಮಿಡುಕದೆ ನಿಂತಿತು. ಪಸಾಯಿತರು ನಡೆದ ವಿಷಯವನ್ನು ಅರಸನಿಗೆ ತಿಳಿಸಿದರು.

ಈ ವಿಷಯವನ್ನು ತಿಳಿದ ಪೆರ್ಮಾಡಿರಾಯನು ಇದ್ದ ಸ್ಥಿತಿಯಲ್ಲೇ ಎದ್ದು ಬಂದು ಬೊಮ್ಮಯ್ಯನನ್ನು ಕಂಡು 'ಎಲೆ ಭಕ್ತ ನೀಂ ಶಾಶ್ವತನ ಮನೆಯಾನೆಯಾದೊಡೆ ಎನ್ನಾನೆಯೊಡನೆ ಕೈಯಿಕ್ಕಿ ಗೆಲ್ದುದುಚಿತನದಲ್ಲದೆ ಮಂತ್ರದಿಂ ಮಾಯದಿಂ ಗತಿಸ್ತಂಭನಂ

---

* ಮದಕರಿಗಳಂ ಕೊಂದದಟಿಸುವ
ನೊದವಿಸುತ ಪುಗುಳಿತ್ತು ಮೆರೆದರು
ಸದಯದಿಂದಿಳಾಭಕ್ತನುಂ ಬಾಹೂರಬೊಮ್ಮಯನು ॥

(ಬಸವಪುರಾಣ ಸಂಧಿ ೨೨–ಸೂಚನೆ)

ಈತನ ವಚನಗಳ ಸಂಖ್ಯೆ 45 ಇವುಗಳಲ್ಲಿ 'ಸಂಗನ ಬಸವಣ್ಣ ಪ್ರಿಯ ಬ್ರಹ್ಮೇಶ್ವರ ಲಿಂಗ' ಎಂಬ ಅಂಕಿತವಿದೆ. (ಕವಿ ಚರಿತ್ರೆ (1972) ಪುಟ 220

ಇವನು ಬಸವನ ಖಾಸ ಶಿಷ್ಯನಾಗಿದ್ದನೆಂದು ತೋರುತ್ತದೆ. ತನ್ನ ವಚನಗಳಲ್ಲಿ ಇತರ ವಚನಕಾರರ ಹೆಸರುಗಳೊಡನೆ ಅಜಗಣ್ಣನನ್ನೂ ನಿಜಗುಣನನ್ನೂ ಹೇಳಿರುತ್ತಾನೆ.
(ಕವಿಚರಿತ್ರೆ (1972) ಅನುಬಂಧ II–ಪುಟ55)

ಮಾಡಿದೊಡೆ ಕುಟಿಲವೆನಿಸುವುದಲ್ಲದೆ ಪರಾಕ್ರಮವಲ್ಲೆಂದು' ನುಡಿದನು. 'ಶರಣರ ಶಕ್ತಿಯನ್ನು ಅರಿಯದ ಅರಸನೇ' ಎನ್ನುತ್ತ ಬೊಮ್ಮಣ್ಣನು ಸಿಂಹದ ಕಣ್ಣುಗಳಂತಿದ್ದ ತನ್ನ ತಾಳವನ್ನು ನೆಲದಲ್ಲಿಟ್ಟು 'ಇವನ್ನು ಎತ್ತಿದರೆ ನಿನ್ನಾನೆಗೆ ಗೆಲವು' ಎಂದು ಹೇಳಿದನು. ಆನೆಯ ಕಟ್ಟನ್ನು ಬಿಚ್ಚಿದರು. ಆನೆ ಬಂದು ತಾಳವನ್ನು ತುಡುಕುವಾಗ ತಾಳದ ರಜ್ಜು ಪಾತಾಳಕ್ಕೆ ಬೇರೂರಿದ್ದಿತು. ಆನೆಯು ಸಿಂಹದ ಕಣ್ಣುಗಳಂತಿದ್ದ ತಾಳವನ್ನೆತ್ತಲಾರದೆ ಭೂಮಿಯ ಮೇಲೆ ಬಿದ್ದು ಪ್ರಾಣ ಬಿಟ್ಟಿತು. ಪೆರ್ಮಾಡಿರಾಯನಿಗೆ ಭೀತಿ ಹುಟ್ಟಿತು. ಬೊಮ್ಮಯ್ಯನು ಅವನನ್ನು ಕರುಣಿಸಿ ನೋಡಿ, ಸತ್ತ ಆನೆಗೆ ಪ್ರಾಣವನಿತ್ತು ಬಾಹೂರಿಗೆ ಹೋದನು. ಅವನ ಕೀರ್ತಿ ಹಬ್ಬಿತು.

ಒಂದು ದಿವಸ ಬೊಮ್ಮಯ್ಯ ಕಲ್ಯಾಣಪುರದ ಹೊರವನದಲ್ಲಿ ಬರುತ್ತಿರುವಾಗ ಸಂಜೆಯಾಯಿತು. ತ್ರಿಪುರಾಂತಕಪ್ರಭುವಿನೋಲಗದಲ್ಲಿ ಕಲ್ಯಾಣದೇವಿ ಎನ್ನುವವಳು ಶಿವಭಕ್ತಿ ಸಂತಾನದ ನಡುವೆ, ಕವಿ ಗಮಕಿ ವಾದಿ ವಾಗ್ಮಿಗಳ ಮಧ್ಯೆ ನರ್ತಿಸುತ್ತಿದ್ದಳು. ಬಾಹೂರ ಬೊಮ್ಮಯ್ಯ ಅಲ್ಲಿಗೆ ಬಂದಾಗ ಜನ ಚೆಲ್ಲಾಪಿಲ್ಲಿಯಾದರು. ನರ್ತನ ನಿಂತಿತು. ಬೊಮ್ಮಯ್ಯನು 'ಹರನ ಮುಂದಣ ಪಾತ್ರವೇಕಾಡದೆನಲಲ್ಲಿ' ಕೇಳಲು ಕುಪಿತನಾದ ಸುಖ ಪ್ರಿಯನೆಂಬುವವನು 'ಆಳೋಕಿಸುವ ಜನದ ಕಣ್ಗೆ ಕಸವಂ ಹೊಯ್ದು ಇನ್ನಾಡವೇ ಳ್ದೊಡಂ ಪಾತ್ರವೇಕಾಡುವುದು' ಎಂದುದಲ್ಲದೆ 'ಜೋಳವನ್ನು ನುಡಿಸಿದ ಗರ್ವ, ಅರಸನ ಆನೆಯ ಗಂಡುಗೆಡಿಸಿದೆನೆಂಬ ಗರ್ವವೇಕೆ ಎನ್ನುತ್ತ ತನ್ನ ಕೈಯಲ್ಲಿದ್ದ ಕಬ್ಬನ್ನು ತೋರಿಸಿ ಇದನ್ನು ಈ ಕಲ್ಲನಂದಿಗೆ ತಿನ್ನಿಸಿದರೆ ಈ ನರ್ತನವನ್ನು ನೀನು ನಿಲ್ಲಿಸಿದ ಕೋಪ ನನಗೆ ಹೋಗುತ್ತದೆ' ಎಂದನು. ಆಗ ಬೊಮ್ಮಯ್ಯನು 'ಕಬ್ಬನ್ನೆಲ್ಲಾ ತಿನ್ನಿಸುತ್ತೇನೆ, ಅರಸನು ಅಚ್ಚರಿಗೊಳ್ಳುವಂತೆ ಆ ನಂದಿಯನ್ನು ನನ್ನೊಡನೆ ನಡೆಯಿಸುತ್ತೇನೆ. ಅದಕ್ಕೆ ಈ ಕೆರೆಯ ನೀರನ್ನು ಕುಡಿಸುತ್ತೇನೆ. ದೇವಾಲಯವನ್ನು ಪ್ರದಕ್ಷಿಣೆ ಮಾಡಿಸಿ ಮೊದಲಿನಂತೆಯೇ ಹರಾಲಯದಲ್ಲಿರಿಸುತ್ತೇನೆ' ಎಂದು ಪ್ರತಿಜ್ಞೆ ಮಾಡಿ ಅದನ್ನು ನೆರವೇರಿಸಿದನು. ಇದನ್ನು ಕಂಡ ಪೆರ್ಮಾಡಿರಾಯನೇ ಮೊದಲಾದವರು ಅಚ್ಚರಿಗೊಂಡು ಬೊಮ್ಮಯ್ಯನ ಭಕ್ತಿಗೆ, ಶಕ್ತಿಗೆ ಮೆಚ್ಚಿ ನಮಸ್ಕರಿಸಿದರು. ಪುಷ್ಪವೃಷ್ಟಿ, ದುಂದುಭಿ ಧ್ವನಿಗಳ ಮಧ್ಯೆ ಬಂದ ಪುಷ್ಪಕ ವಿಮಾನವು ಬೊಮ್ಮಯ್ಯನನ್ನು ಕೈಲಾಸಕ್ಕೆ ಕರೆದೊಯ್ದಿತು. ಶಿವನು ಆತನಿಗೆ ಗಣ ಪದವಿಯಿತ್ತು ಸತ್ಕರಿಸಿದನು.

೫ ಕೋವೂರ ಬೊಮ್ಮಯ್ಯ *

ಬಿಜಾಪುರ ಜಿಲ್ಲೆಯಲ್ಲಿರುವ ಕೋವೂರನ್ನು ಚಾಲುಕ್ಯ ರಾಜನಾದ ಬೊಮ್ಮಯ್ಯನು

---

*ಇವನು ವಚನಗಳನ್ನು ಬರೆದಿದ್ದಾನೆಯೋ ಇಲ್ಲವೋ ತಿಳಿಯದು. ಒಂದು ವೇಳೆ ಬರೆದಿದ್ದರೆ ಇವನ ಅಂಕಿತವು 'ಅಂಬುಧಾರಾ ರಾಮನಾಥ'ನೆಂದಿರಬೇಕು.
(ಕವಿ ಚರಿತ್ರೆ (1972) ಅನುಬಂಧ II ಪುಟ-97)

ಆಳುತ್ತಿದ್ದನು. ಆತನು ಹಿರಿಯ ಶಿವಭಕ್ತನಾಗಿ ಆ ಊರಿನ ಅಂಬುಧಾರಾ ರಾಮನಾಥನಿಗೆ ಅತ್ಯಂತ ನಿಷ್ಠೆಯಿಂದ ನಡೆದುಕೊಳ್ಳುತ್ತಿದ್ದನು.

ಆ ಕಾಲದಲ್ಲಿ ಕೋವೂರು ಜೈನರ ಪ್ರಾಬಲ್ಯಕ್ಕೆ ಒಳಗಾಗಿತ್ತು. ಅವರಲ್ಲಿ ಮುನ್ನೂರು ಜನಮಾತ್ರ ಶಿವಭಕ್ತರಾಗಿದ್ದು ಅರಸನ ಅನುಯಾಯಿಗಳಾಗಿದ್ದರು. ಈ ಶಿವಭಕ್ತರಿಂದ ಕೂಡಿದ ಅರಮನೆ ಶಿವಪುರದಂತೆ ಸದಾ ರಂಜಿಸುತ್ತಿತ್ತು.

ಅರಸನಿಗೆ ಹನ್ನೆರಡು ಜನ ಪತ್ನಿಯರಿದ್ದರು. ಅವರಲ್ಲಿ ಕಳಾವತಿಯೆಂಬುವಳಿಗೆ ಮಲ್ಲಿದೇವನೆಂಬ ಮಗನಿದ್ದನು. ಅವನಿಗೆ ವಯಸ್ಸಿನೊಡನೆ ಶಿವಭಕ್ತಿಯೂ ಬೆಳೆಯಿತು. ಹೀಗೆ ಹದಿನಾರುವರುಷ ತುಂಬಿದ ಶಿವಭಕ್ತನಾದ ಮಗನನ್ನು ನೋಡಿ ಅರಸನೂ ಕಳಾವತಿಯೂ ಸಂತೋಷಭರಿತರಾದರು.

ಹೀಗಿರುವಲ್ಲಿ ಅರಸನಿಗೆ ಗಣಪರ್ವದ ನೆನಪು ಬಂದಿತು. ಕೂಡಲೆ ಆತನು ಪತ್ನೀ ಪುತ್ರರನ್ನೂ ಮಂತ್ರಿಮುಖ್ಯರನ್ನೂ ಬರಮಾಡಿಕೊಂಡು ತಾನು ಗಣಪರ್ವದ ನಿಮಿತ್ತ ಆರುತಿಂಗಳು ರಾಮನಾಥ ದೇವಾಲಯದಲ್ಲಿರುವುದಾಗಿಯೂ ಆ ಮಧ್ಯೆ ಸರ್ವನಾಶವಾದರೂ ಸಹ ತಾನು ಶಿವನ ಸೇವೆಯಿಂದ ವಿಮುಖನಾಗುವುದಿಲ್ಲವೆಂದೂ ಹೇಳಿ, ತನ್ನ ಮುನ್ನೂರು ಜನ ಭಕ್ತರೊಡನೆ ಅಂಬುಧಾರಾ ರಾಮನಾಥನಲ್ಲಿಗೆ ತೆರಳಿದನು.

ಇತ್ತ ಅರಸನಿಲ್ಲದ ವೇಳೆಯಲ್ಲಿ ಜೈನರು ಅರಸನ ಗಣಪರ್ವವನ್ನು ಕೆಡಿಸಬೇಕೆಂದು ಯೋಚಿಸಿ ಒಬ್ಬ ಸವಣನಿಗೆ ಶಿವಭಕ್ತನ ವೇಷವನ್ನು ಹಾಕಿ ಮಲ್ಲಿದೇವನನ್ನು ಕಾಣಲು ಅರಮನೆಗೆ ಕಳಿಸಿದರು. ಮಲ್ಲಿದೇವನು ಆತನನ್ನು ನಿಜವಾದ ಭಕ್ತನೆಂದೇ ನಂಬಿ ಸತ್ಕರಿಸಿದನು. ಆ ಕಪಟಭಕ್ತನು ಯಾರೂ ಇಲ್ಲದ ವೇಳೆಯಲ್ಲಿ ಮಲ್ಲಿದೇವನನ್ನು ಕೊಂದು ಪರಾರಿಯಾದನು.

ಸ್ವಲ್ಪ ಸಮಯದ ಅನಂತರ ಅಲ್ಲಿಗೆ ಬಂದ ಕಳಾವತಿಯು ಸತ್ತು ಬಿದ್ದಿದ್ದ ಮಗನನ್ನು ನೋಡಿ ದುಃಖಿತೆಯಾದಳು. ಆಕೆಯು ಹಿರಿಯರನ್ನು ಬರಮಾಡಿಕೊಂಡು ಸಮಾಲೋಚಿಸಿದಳು. ಈ ಘೋರ ಕೃತ್ಯಕ್ಕೆ ಜೈನರೇ ಕಾರಣರೆಂದೂ ಅರಸನು ಮಾಡುತ್ತಿದ್ದ ಗಣಪರ್ವವನ್ನು ಕೆಡಿಸುವ ಸಲುವಾಗಿ ಈ ಕೃತ್ಯವನ್ನು ನಡೆಸಿದರೆಂದೂ ತಿಳಿದು 'ಕುಮಾರ ನಳಿದರೆ ಗಣಪರ್ವ ಅಳಿಯುವುದು ಬೇಡ' ಎಂದು ನಿರ್ಧರಿಸಿ ಶವವನ್ನು ಸಿಂಗರಿಸಿ ಒಂದು ಗೋಪ್ಯಸ್ಥಾನದಲ್ಲಿರಿಸಿದಳು.

ಆರು ತಿಂಗಳಾದ ಮೇಲೆ ಗಣಪರ್ವ ಮುಗಿಯಿತು. ಅರಸನು ಅಂಬುಧಾರಾ ರಾಮನಾಥನಾಲಯದಿಂದ ಹೊರಟುಬಂದು ಒಂದು ವಟವೃಕ್ಷದ ಕೆಳಗೆ ಶಿವ ಗೋಷ್ಠಿಯಲ್ಲಿದ್ದನು. ಇದನ್ನು ತಿಳಿದ ಜೈನರು ತಮ್ಮ ಋಷಿಯರನ್ನೊಡಗೂಡಿ ಬಂದು ರಾಜನಿಗೆ ಕಾಣಿಕೆಯಿತ್ತು 'ರಾಜನೇ ಗಣಪರ್ವ ಮುಗಿಯಿತೆ ? ಇದರಿಂದ ನಿನಗೆ ದೊರೆತ ಪ್ರತ್ಯಕ್ಷ ಫಲವೇನು ?' ಎಂದು ಕಟಕಿಯಾಡಿದರು.

"ಈಗ ನಾವು ವಟವೃಕ್ಷವನ್ನು ನಿಂತ ನೆಲೆಯಲ್ಲಿಯೇ ಭಸ್ಮ ಮಾಡುವೆವು. ನೀವು ಅದನ್ನು ಪುನಃ ಚಿಗುರಿಸಿದರೆ ನಾವು ನಿಮ್ಮ ಮತವನ್ನು ಅವಲಂಬಿಸುತ್ತೇವೆ ಎಂದು ಹೇಳಿ ಜೈನರು ಕುಟಿಲಮಂತ್ರವನ್ನು ಪಠಿಸುತ್ತಾ ಮರಕ್ಕೆ ಅಕ್ಷತೆಯನ್ನು ಎರಚಿದರು. ಮರ ಧಗಧಗನೆ ಉರಿದು ಬೂದಿಯಾಯಿತು. ಈ ಮರುಳುಗಳ ಆಟಕ್ಕೆ ಮರುಕಗೊಂಡ ಬೊಮ್ಮಯ್ಯನು ಮನದಲ್ಲಿಯೇ ಚಂದ್ರಶೇಖರನನ್ನು ಸ್ಮರಿಸಲು ಆ ಪುರವು ಬೂದಿಯೊಳಗಿಂದ ಅಂಕುರಿಸಿ ಹೆಮ್ಮರವಾಗಿ ಮೊದಲಿಗಿಂತಲೂ ಹತ್ತು ಮಡಿ ಉದ್ದಗಲವಾಗಿ ಪುಣ್ಯಕುಜದಂತೆ ಕಂಗೊಳಿಸಿತು. ಈ ಅದ್ಭುತ ಶಕ್ತಿಯನ್ನು ಕಂಡು ಹೆದರಿ ಓಡುತ್ತಿದ್ದ ಜೈನರನ್ನು ಅರಸನು ಬರಮಾಡಿಕೊಂಡು ವಿವೇಕವನ್ನು ಹೇಳಿ ಅರಮನೆಗೆ ಹಿಂದಿರುಗಿದನು.

ಹೀಗೆ ಬಂದ ಅರಸನಿಗೆ ಅವನ ಹನ್ನೆರಡು ಮಂದಿ ಅರಸಿಯರು ಆರತಿಯೆತ್ತಿದರು. ಆದರೆ ಕಳಾವತಿಯ ಕಣ್ಣಿನಿಂದ ಧಾರಾಕಾರವಾಗಿ ನೀರು ಸುರಿಯುತ್ತಿದ್ದುದನ್ನು ಕಂಡ ರಾಜನು ಮಗನ ಸಾವಿನ ಸುದ್ದಿಯನ್ನು ತಿಳಿದನು. ಆತನು ಕೋಪೋದ್ರಿಕ್ತನಾಗಿ ಮಗನ ಶರೀರವಿದ್ದಲ್ಲಿಗೆ ಬಂದು 'ಮೃಡಪದಸಮಾಧಿ ಇನ್ನು ಸಾಕು ಮಗು ಏಳೇಳೆಂದು' ಸರ್ವಾಂಗ ವನ್ನೂ ಪ್ರೀತಿಯಿಂದ ಸವರಿದನು. ತಂದೆಯ ಹಸ್ತಸ್ಪರ್ಶದಿಂದ ಮಲ್ಲಿದೇವನು ನಿದ್ರೆ ತಿಳಿದಂತೆ ಎದ್ದು ಕುಳಿತು ತಂದೆಯನ್ನು ಆಲಿಂಗಿಸಿಕೊಂಡನು. ಜೀವಪಡೆದ ಬಾಲಕನನ್ನು ನೋಡಿ ಎಲ್ಲರೂ ಆನಂದಪಟ್ಟರು. ಮಗನು ಜೀವವನ್ನು ಮರಳಿ ಪಡೆದ ಸವಿನೆನಪಿಗಾಗಿ 'ಗಣಪರ್ವ ಇನ್ನೊಮ್ಮೆ ನಡೆಯಲಿ' ಎಂದು ಅರಸನು ಆಜ್ಞೆಮಾಡಿದನು.

ಗಣಪರ್ವಕ್ಕೆ ಬೇಕಾಗಿದ್ದ ಇಪ್ಪತ್ತುನಾಲ್ಕು ಖಂಡುಗ ಅಕ್ಕಿಯನ್ನು ಸಿದ್ಧಪಡಿಸಲು ದಾಸಿಯರಿಗೆ ಹೇಳಲು, ಸಲಿಗೆಯುಳ್ಳ ದಾಸಿಯೊಬ್ಬಳು ಅಷ್ಟು ಭತ್ತವನ್ನು ಕುಟ್ಟಲು ಕೊತ್ತಳದ ಮಾರಿಮಸಣಿಯೇ ಬರಬೇಕೆಂದಳು. ಇದನ್ನು ತಿಳಿದ ಅರಸನು ಕೊತ್ತಳದ ಉಗ್ರದೇವತೆಯಾದ ಮಾರಿ ಮಸಣಿಕಬ್ಬೆಯಿಂದ ಅಷ್ಟು ಅಕ್ಕಿಯನ್ನು ಸಿದ್ಧಪಡಿಸಿಕೊಂಡು ಅತ್ಯಂತ ಸಂಭ್ರಮದಿಂದ ಗಣಪರ್ವವನ್ನು ಮಾಡಿದನು.

ಇದನ್ನೆಲ್ಲಾ ನೋಡಿ ಶ್ರವಣರ ಅಸೂಯೆ ಕೆರಳಿತು. ಅವರು 'ಅರಸನೆ ಪರ್ವ ಪರ್ವವೆಂದು ಹೇಳಿ ಶರಣರು ಉಂಡುಹೋದುದನ್ನು ಕಂಡೆವಲ್ಲದೆ ನಿಮ್ಮ ದೇವರು ಉಂಡುದನ್ನು ಕಾಣಲಿಲ್ಲ. ಆದ್ದರಿಂದ ನೀನು ಅಂಬುಧಾರಾ ರಾಮನಾಥನಿಗೆ ನಾವೆಲ್ಲರೂ ಕಾಣುವಂತೆ ಆರೋಗಿಸುವುದು' ಎಂದರು.

ಅರಸನು ಅವರ ಮೂರ್ಖತನಕ್ಕೆ ಮನದಲ್ಲಿಯೇ ಪಶ್ಚಾತ್ತಾಪ ಪಟ್ಟು 'ಹಾಗೆಯೇ ಆಗಲೆಂದು' ಹೇಳಿ ಪಡಿಯರನನ್ನು ಕರೆದು ಅಂಬುಧಾರಾ ರಾಮನಾಥನನ್ನು ಕರೆದು ತರು ವಂತೆ ಹೇಳಿದನು. ಅದರಂತೆ ಪಡಿಯರನು ರಾಮನಾಥನಾಲಯಕ್ಕೆ ಬಂದು ದೇವದೇವನ ಮುಂದೆ ನಿಂದು ಅರಸನು ಹೇಳಿದ ಮಾತುಗಳನ್ನು ಉಸುರಿದನು. ಭಕ್ತನ ಕರೆಗೆ ಓಗೊಟ್ಟು ಅರಮನೆಯ ಪ್ರವೇಶದ್ವಾರದಲ್ಲಿ ಕೋಟಿಸೂರ್ಯರನ್ನು ಹೋಲುವ ಕಾಂತಿಯಿಂದ

ರಾಮನಾಥ ಕಾಣಿಸಿಕೊಂಡನು. ರಾಮನಾಥನನ್ನು ಕಂಡು ಬೊಮ್ಮಿತಂದೆ ಓಡೋಡಿ ಬಂದು ನಮಸ್ಕರಿಸಿ ಪರಿಪರಿಯಾಗಿ ಸ್ತುತಿಸಿದನು. ಶಂಭುವನ್ನು ನೋಡಿದ ಜೈನರು ಪರಮಾತ್ಮ ವಿಶ್ವವ್ಯಾಪಿ ಎಂಬುದನ್ನು ಮನದಟ್ಟುಮಾಡಿಕೊಂಡು ತಳಮಳಗೊಂಡರು. ಇದನ್ನೆಲ್ಲಾ ನೋಡಿದ ಬೊಮ್ಮಯ್ಯನಿಗೆ ಖೇದವಾಯಿತು. ಆತನು 'ಇದುವರೆಗೆ ಜೈನರಿಂದಾದ ಮೂರು ತಪ್ಪುಗಳನ್ನು ಕ್ಷಮಿಸಿದೆನು. ಇನ್ನು ಮುಂದೆ ಕ್ಷಮಿಸಲಾಗುವುದಿಲ್ಲ' ಎಂದು ಎಚ್ಚರಿಸಿ ಅವರನ್ನು ಕಳಿಸಿದನು.

ಇತ್ತ ಕೋವೂರೊಳಗೆಲ್ಲ ಕಾವುಕವೆದ್ದಂತೆ ಜೈನರೆಲ್ಲ ಒಟ್ಟಾಗಿ ಪುಷ್ಪಾಂಜಲಿ ಎಂಬ ನರಕ ಪರ್ವವನ್ನು ಮಾಡತೊಡಗಿದರು. ಆ ನೆಪದಲ್ಲಿ ಶಿವದ್ರೋಹವನ್ನು ಬಗೆದರು. ಇದನ್ನು ಕಂಡ ಪಡಿಯರರು ಬಂದು 'ಜೈನರು ಪುಷ್ಪಾಂಜಲಿ ಎಂಬ ಪರ್ವವನ್ನು ನಡೆಸುತ್ತ ಶಿವದ್ರೋಹವನ್ನು ಮಾಡುತ್ತಿದ್ದಾರೆ' ಎಂದು ಅರಸನಿಗೆ ತಿಳಿಸಿದರು. ಸುದ್ದಿಯನ್ನು ತಿಳಿದ ದೊರೆ ಅತ್ಯಂತ ಕೋಪಾವಿಷ್ಟನಾಗಿ ಜೈನರ ಮೇಲೆರಗಿ ಜೈನ ಪಡೆಯನ್ನು ನಾಶಮಾಡಿ ಬಸದಿಗಳನ್ನು ನೆಲಸಮಮಾಡಿ ಆ ಪಟ್ಟಣವನ್ನು ಶಿವಪುರವನ್ನಾಗಿ ಮಾಡಿದನು. ಶಿವ ಶರಣರು ಕಿಕ್ಕಿರಿದು ನೆರೆದು ಶಿವಾನುಭವಗೋಷ್ಠಿಗಳನ್ನು ನಡೆಸುತ್ತಿದ್ದರು.

ಒಂದು ದಿನ ಶರಣರ ಗೋಷ್ಠಿ ನಡೆಯುತ್ತಿದ್ದ ಸಮಯದಲ್ಲಿ ನಂದಿಯುಂಡಿಗೆಯ ರಾಯಸವೊಂದು ಸಭಾಮಧ್ಯದಲ್ಲಿ ಬಂದುಬಿದ್ದಿತು. ಅದನ್ನು ತೆಗೆದು ನೋಡಲು ಅದರಲ್ಲಿ ಅರಸನು ಮುನ್ನೂರುಜನ ವೀರಮಾಹೇಶ್ವರರೊಡನೆ ನಾಳೆ ಕೈಲಾಸಕ್ಕೆ ಬರಬೇಕೆಂದು ಬರೆದಿದ್ದಿತು. ಅದನ್ನು ನೋಡಿದ ಬೊಮ್ಮಯ್ಯನು ತನ್ನ ಸಂಸಾರವನ್ನು ನೀಗಿ ಶಿವನ ಅಪ್ಪಣೆಯಂತೆ ಅವನ ಸಾನ್ನಿಧ್ಯವನ್ನು ಸೇರಬೇಕೆಂದನು.

ಆತನು ತನ್ನ ಮಗನನ್ನು ಕರೆದು ಶಿವನಲ್ಲಿ ಶಿವಶರಣರಲ್ಲಿ ನಡೆದುಕೊಳ್ಳಬೇಕಾದ ರೀತಿ ನೀತಿಗಳನ್ನು ತಿಳಿಸಿ ಮೂನೂರ್ವರು ವೀರಮಾಹೇಶ್ವರರೊಡನೆ ಅಂಬುಧಾರಾ ರಾಮನಾಥನಲ್ಲಿಗೆ ನಡೆದನು. ಎಲ್ಲರೂ ರಾಮನಾಥನ ಎದುರಿಗೆ ನಿಂತು ತಾವು ಈ ನಶ್ವರ ದೇಹದಿಂದ ಇರುವುದಿಲ್ಲವೆಂದೂ ಆತ್ಮಾರ್ಪಣೆ ಮಾಡಿಕೊಳ್ಳುವೆವೆಂದೂ ನುಡಿದರು. ಬೊಮ್ಮಯ್ಯ ಖಡ್ಗದಿಂದ ಕತ್ತನ್ನು ಕತ್ತರಿಸಿಕೊಂಡು ರಾಮನಾಥನ ಮುಂದಿಟ್ಟನು. ಅವನನ್ನನುಸರಿಸಿ ಎಲ್ಲರೂ ಆತ್ಮಾರ್ಪಣೆ ಮಾಡಿಕೊಂಡರು. ಆಗ ಮುನ್ನೂರು ಪುಷ್ಪಕಗಳು ಬಂದು ಅವರನ್ನೆಲ್ಲಾ ಕೈಲಾಸಕ್ಕೆ ಕೊಂಡೊಯ್ದುವು. ಶಿವ ತನ್ನ ಭಕ್ತರನ್ನು ನಂದೀಶನೇ ಮುಂತಾದ ಗಣಮುಖ್ಯರ ಮುಂದೆ ಹಾಡಿ ಹೊಗಳಿ ಗಣಪದವಿಯನ್ನಿತ್ತನು.

## III ವಿಮರ್ಶೆ

ಕಥಾಸಾರದ ಅವಲೋಕನದಿಂದ ಹರಿಹರನ ರಗಳೆಗಳು ಸ್ಥೂಲವಾಗಿ ಒಂದೆ ಚೌಕಟ್ಟಿನಲ್ಲಿ ರಚಿತವಾಗಿರುವುದು ಕಂಡುಬರುತ್ತದೆ. ಪ್ರತಿಯೊಂದು ರಗಳೆಯ ಆರಂಭದಲ್ಲಿ ಕಥಾನಾಯಕನ ಸ್ತುತಿರೂಪವಾದ ಒಂದು ಕಂದ ಅಥವಾ ವೃತ್ತವಿರುತ್ತದೆ. ಮುಂದೆ

ರಗಳೆಯಲ್ಲಿ ನೇರವಾಗಿ ಕಥಾನಾಯಕನ ಊರು, ಹೆಸರು, ತಾಯಿ ತಂದೆ, ನಿತ್ಯನೇಮ ಕಾರ್ಯಕ್ಷೇತ್ರ, ಭಕ್ತ ಮತ್ತು ಭಗವಂತನ ಸಂಬಂಧ, ಶಿವೈಕನಿಷ್ಠೆ, ಅದಕ್ಕೆ ಒದಗಿಬರುವ ಅಡ್ಡಿ ಆತಂಕಗಳು, ಅದರಲ್ಲಿ ಶರಣನ ವಿಜಯ, ಅನಂತರ ಪುಷ್ಪಕದ ಆಗಮನ, ಭಕ್ತ, ಕೆಲವುಬಾರಿ ಅವನ ಜೊತೆಯವರೂ ಆ ವಿಮಾನದಲ್ಲಿ ರಜತಾದ್ರಿಗೆ ಹೋಗುವುದು, ಶಿವನು ಕಥಾನಾಯಕನಿಗೆ ಗಣಪದವಿಯನ್ನೀಯುವುದು, ಮಂಗಳಾಶಾಸನ ಹೀಗೆ ಸಾಗುತ್ತದೆ.

ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವನು ನೀಡುವ ಒಂದೊಂದು ವಿವರವೂ ಭಿನ್ನ ಭಿನ್ನವಾಗಿ ನಿಲ್ಲುತ್ತವೆ. ಅವನ ಕವಿತಾವೇಶದಲ್ಲಿ ಪ್ರತಿಭೆಯ ಮಹಾಪೂರದಲ್ಲಿ ಯಾವುದೂ ಪುನರುಕ್ತವಾಗುವುದಿಲ್ಲ. ಪ್ರಸ್ತುತಸಂಕಲನದಲ್ಲಿ ಬರುವ ಒಂದೆರಡು ಪ್ರಸಂಗ ಗಳನ್ನು ಉದಾಹರಣೆಗಾಗಿ ಗಮನಿಸಬಹುದು. ಹರಿಹರ ಭಕ್ತರನ್ನು ಪರಿಚಯ ಮಾಡಿ ಕೊಡುವುದೇ ಒಂದು ವೈಶಿಷ್ಟ್ಯ. ಅವನ ವರ್ಣನೆಯಿಂದ ಆ ಭಕ್ತನ ಸಾಕ್ಷಾತ್ ಚಿತ್ರಣ ಓದುಗನಲ್ಲಿ ಸ್ಪಷ್ಟವಾಗಿ ಮೂಡುತ್ತದೆ.

ಉದಾಹರಣೆಗೆ—

ಸುರಗಿಯ ಚವುಂಡರಾಯಂ ತನ್ನ ನಾಮವದು
ಪುರಹರನನೊಲುಮೆಯಿಂದರ್ಚಿಸುವ ನೇಮವದು
ನಿಚ್ಚಟಂ ನಿರ್ಮಳಂ ನಿರುಪಮಂ ಕಡುಮಾನಿ
ಅಚ್ಚ ಶಿವಭಕ್ತನುತ್ಕೃಷ್ಟನೀಶಧ್ಯಾನಿ (೩)*
ಮುಸುಟೆಯ ಚವುಂಡರಾಯಂ ಸುಖವನಪ್ಪುವಂ
ಆತನ ಶಿವಾಚಾರಮಂ ಪೇಳಲೆನ್ನಳವೆ
ನೂತನಂ ಧರಣಿತಳಕೆ ಬಣ್ಣಿಸಲೆನ್ನಳವೆ
ಶರಣಾರ್ಥಿ ಎನುತ ಹುಟ್ಟಿದನಮಮ ಜಂಗಮಕೆ
ಶರಣಾರ್ಥಿಯೆನುತ ಬೆಳೆದಂ ಪೊಸತು ಕಲಿಯುಗಕೆ (೧೧)

ಹೀಗೆಯೇ ತೆಲುಗು ಜೊಮ್ಮಯ್ಯ (೨೨), ಬಾಹೂರು ಬೊಮ್ಮಯ್ಯ (೪೫), ಕೋವೂರು ಬೊಮ್ಮಯ್ಯ (೬೮) ಮುಂತಾದ ಶರಣರ ವರ್ಣನೆಯೂ ಬರುತ್ತದೆ. ಹರಿಹರನು ಮಾಡಿಕೊಡುವ ಶರಣರ ಪರಿಚಯದಿಂದ ಓದುಗನಿಗೆ ಅವರ ಬಗ್ಗೆ ಆತ್ಮೀಯತೆ ಉಂಟಾಗುತ್ತದೆ. ಇದೇ ರೀತಿ ಈ ಸಂಕಲನದಲ್ಲಿ ಸತ್ತ ಎತ್ತನ್ನು ಶರಣರು ಮೇಲೆತ್ತುವ ಸಂದರ್ಭದಲ್ಲಿ ಎದ್ದು ಬರುವ ಎತ್ತುಗಳ ವರ್ಣನೆ (೧೪, ೧೬, ೬೨)ಗಳು ಕೂಡ ಮೇಲಿನ ಮಾತಿಗೆ ಸಮರ್ಥನೆಯನ್ನು ನೀಡುತ್ತವೆ.

ಹರಿಹರ ಸಹಜ ಭಕ್ತ. ಹಾಗಾಗಿ ಅವನ ಕಾವ್ಯಗಳಲ್ಲಿ ಭಕ್ತ ಮತ್ತು ಭಗವಂತನ ಸಂಬಂಧ ತುಂಬ ಮಧುರವಾಗಿ, ಸಮರ್ಥವಾಗಿ ಚಿತ್ರಿತವಾಗಿದೆ. ಈ ಸಂದರ್ಭಗಳಲ್ಲಿ

---

* ಇಲ್ಲಿ ಬರುವ ಸಂಖ್ಯೆಗಳು ಪ್ರಸ್ತುತ ಸಂಕಲನದ ಪುಟಸಂಖ್ಯೆಯನ್ನು ನಿರ್ದೇಶಿಸುತ್ತವೆ.

ಹರಿಹರನ ಚಿತ್ತವೃತ್ತಿಯ ಪರಿಪಕ್ವತೆಯನ್ನು ಕಾಣಬಹುದು. ಹರಿಹರನ ಶಿವ ಕರುಣಾಮಯಿ, ಭಕ್ತ ಶಿವೈಕನಿಷ್ಠ. ಭಕ್ತನ ನಿಷ್ಠೆಗೆ ಶಿವನೂ ಅಂಜುತ್ತಾನೆ. ಸುರಗಿ ಚೌಡಯ್ಯನಿಗೆ ಶಿವನು ಕನಸಿನಲ್ಲಿ 'ಹಸಿದೆನೆಲೆ ಮಗನೆ' ಎನ್ನುತ್ತಾನೆ. ಚೌಡಯ್ಯನು ಎಡೆಮಾಡಿ ಬೇಡಿದಾಗ ಶಿವನು ಊಟಮಾಡುವುದಿಲ್ಲ. ಆಗ ಚೌಡಯ್ಯನು ಕುತ್ತಿಗೆಗೆ ಸುರಗಿಯನ್ನು ಆನಿಸುತ್ತಾನೆ. ಕೂಡಲೆ 'ಆರೋಗಿಸಿದಂ ಶಿವಂ ಚೌಂಡರಾಯಂಗಂಜಿ'. ಭಕ್ತನಿಗೆ ಶಿವನಲ್ಲಿ ಅಪಾರ ವಿಶ್ವಾಸ, ನಂಬಿದ ಭಕ್ತನನ್ನು ಶಿವನು ಕೈಬಿಡುವುದಿಲ್ಲ ಎನ್ನುವ ಅಚಲನಂಬಿಕೆ. ಕೋವೂರು ಬೊಮ್ಮಯ್ಯನ ರಗಳೆಯಲ್ಲಿ ಒಂದು ಸಂದರ್ಭ ಹೀಗೆ ಬರುತ್ತದೆ—ಕೋವೂರು ಬೊಮ್ಮಯ್ಯ ಗಣಪರ್ವವನ್ನು ತೀರಿಸಿಕೊಂಡು ಊರಿಗೆ ಹಿಂದಿರುಗುತ್ತಾನೆ. ಹನ್ನೆರಡು ಜನ ರಾಣಿಯರು ಆರತಿಯೆತ್ತುತ್ತಾರೆ. ಕಳಾವತಿ ಎಂಬ ರಾಣಿ ಆಗ ಕಣ್ಣೀರಿಕ್ಕುತ್ತಾಳೆ. ಬೊಮ್ಮಯ್ಯ ವಿಚಾರಿಸಲಾಗಿ ತನ್ನ ಮಗ ಜೈನರ ಕುಹಕದಿಂದ ಸತ್ತ ಎಂಬ ಸುದ್ದಿ ತಿಳಿಯುತ್ತದೆ. ಆಗ ಬೊಮ್ಮಯ್ಯ ಕಳವಳ ಪಡುವುದಿಲ್ಲ. ದೃಢಮನದಿಂದ 'ಅಪ್ಪುದಿಂದೆಂಬ ನಿಶ್ಚಯವೀವ ಪುರಹರಂ' ತಪ್ಪದೆನ್ನಿಚ್ಛೆಯಂ ಸಲಿಸನೇ ಶಂಕರಂ' ಎಂದು ಹೇಳುತ್ತ ಹೋಗಿ ಮಗನನ್ನು ಏಳಿಸಿಕೊಂಡು ಬರುತ್ತಾನೆ. ಅಷ್ಟೇ ಅಲ್ಲದೆ ಮತ್ತೊಂದು ದಿವಸ ಜೈನರು ಬೊಮ್ಮಯ್ಯನಿಗೆ 'ನಿಮ್ಮ ಭಗವಂತನನ್ನು ಕಾಣಿಸು' ಎನ್ನುತ್ತಾರೆ. ಆಗ ಬೊಮ್ಮಯ್ಯನು 'ಪಡಿಯಜನಂ ಕರೆದು ನೀಂ ಪೋಗಿ ಪುರದ ಪಶ್ಚಿಮಭಾಗದೊಳ್ ನಿಂದು ಅಂಬುಧಾರಾ ರಾಮನಾಥಂಗೆ ಎನ್ನೊಡೆಯಂಗೆ ಬಿನ್ನೈಸಿ ಬಿಜಯಂಗೈಸಿಕೊಂಡು ಬಾಯೆಂದು' ಕಳಿಸುತ್ತಾನೆ. ಶಿವನು ಕೋವೂರು ಬೊಮ್ಮಯ್ಯನ ಮಾತನ್ನು ನಡೆಸಿಕೊಡುತ್ತಾನೆ. ಈ ಪ್ರಸಂಗದಿಂದ ಭಕ್ತನ ಅಚಲನಂಬಿಕೆ ಮತ್ತು ಶಿವನ ಭಕ್ತವಾತ್ಸಲ್ಯ ವ್ಯಕ್ತವಾಗುತ್ತದೆ.

ಹರಿಹರ ಲೋಕದ ಸಂಗತಿಗಳನ್ನು ಬಾಹ್ಯಘಟನೆಗಳನ್ನು ಚಿತ್ರಿಸುವುದರ ಜೊತೆಗೆ ಮಾನವ ಚಿತ್ತವೃತ್ತಿಯಂತಹ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳನ್ನು ಯಶಸ್ವಿಯಾಗಿ ಚಿತ್ರಿಸಿದ್ದಾನೆ. ತೆಲುಗುಜೊಮ್ಮಿತಂದೆ ಶಿವನಿಂದೆ ಮಾಡಿದ ವಿಷ್ಣುಪುರಾಣದ ಭಟ್ಟನನ್ನು ಕೊಂದ ಬಗ್ಗೆ ಪೆರ್ಮಾಡಿರಾಯ ಸೇವಕರನ್ನು ಕೇಳುತ್ತಾನೆ. ಅಂಜಿದ ಅವರ ಬಾಯಿಯಲ್ಲಿ ಮಾತೇ ಹೊರಡುವುದಿಲ್ಲ. 'ಜೊಮ್ಮಿತಂದೆಗಳ್ ಕೊಂದರೆಂದು ಪೇಳಲಂಜಿ ಕೈಸನ್ನೆಯಿಂ ಬಾಯಿಸನ್ನೆಯಿಂ' (೩೮) ತೋರಿಸುತ್ತಾರೆ. ಸಂಗತಿಯನ್ನು ಅರ್ಥಮಾಡಿಕೊಂಡ ದೊರೆ ಮುಂದೆ ಬಂದು ಸತ್ತ ಬ್ರಾಹ್ಮಣನನ್ನು ಕಂಡು 'ಮುಖದ ಕೈಯಿಂ ಮನದ ಕೌತುಕದಿಂ ಚಿತ್ತದ ನಿರೋಧದಿಂ ತಲೆದೂಗುತ್ತೆ ಪೆರ್ಮಾಡಿರಾಯಂ ಸಿಂಹಾಸನಾರೂಢನುಂ ಕೋಪಾರೂಢನುಮಾಗಿ....ಕೆಂಪಡರ್ದ ಕಂಗಳಿಂ ಕೆತ್ತುವ ಮೀಸೆಯಿಂ ಚಿತ್ತದ ಕ್ಷೋಭೆಯಿಂ ಮನದ ಕಡುಗೋಪದಿಂ' (೩೯) ಜೊಮ್ಮಣ್ಣನನ್ನು ಕರೆಯಲು ಮತ್ತೆ ಮತ್ತೆ ಪಡಿಯರರನ್ನು ಕಳಿಸುತ್ತಾನೆ. ಇಂತಹುದೇ ಮತ್ತೊಂದು ಒಳ್ಳೆಯ ನಿದರ್ಶನ ಕೇಶಿರಾಜ ದಣ್ಣಾಯಕರು ಶಿವಪೂಜೆ ಮಾಡುವಾಗ ಕಂಡುಬರುತ್ತದೆ. ಆರೋಗಣೆಗೆ ಜೊಮ್ಮಣ್ಣ ನರಸಿ

ಮನೆಯಲ್ಲಿ ಮಾಡಿದ್ದ ಮಾಂಸದ ಅಡುಗೆಯುನ್ನು ಎಡೆಮಾಡುತ್ತಿದ್ದರೆ ಕೇಶಿರಾಜ ದಣ್ಣಾಯಕರು—

'ಸುಮ್ಮಾನ ಉಡುಗಿದಣ್ಣಾಯಕರ್ ನಡುಗುತಿರೆ
ಸೋಮನಾಥನನೊಮ್ಮೆ ಬಡಿಸುತಿರ್ಪರನೊಮ್ಮೆ
ಭೀಮನಾಥನನೊಮ್ಮೆ ಜೊಮ್ಮಣ್ಣನುಮನೊಮ್ಮೆ
ನೋಡುತಂ ದಣ್ಣಾಯಕರ್ ಕರಗಿಕೊರಗುತಂ
ಬಾಡುತಂ ನುಡಿಯಲಮ್ಮದೆ ಕಂದಿಕುಂದುತಂ'

ಇರೆ ಜೊಮ್ಮಿತಂದೆ ಎಲ್ಲವನ್ನೂ ಅರಿತು ನಸುನಗುತ್ತ ಪಲಲವನ್ನು ಪಕ್ವಾನ್ನತತಿಯಾಗಿ ಮಾಡುತ್ತಾರೆ. ಹೀಗೆ ಹಲವಾರು ಚಿತ್ರಣಗಳು ಹರಿಹರನ ರಗಳೆಗಳಲ್ಲಿ ಕಂಡು ಬರುತ್ತವೆ.

ಹರಿಹರನ ರಗಳೆಗಳಲ್ಲಿ ವರ್ಣನೆಗಳಿವೆ. ಆದರೆ ಅವು ಕೇವಲ ವರ್ಣನೆಗಳಿಗಾಗಿ ಬಂದಿಲ್ಲ. ಅವನ ಕೃತಿಗಳಲ್ಲಿ ಬರುವ ವರ್ಣನೆಗಳು ಕಥೆಯ ಓಟಕ್ಕೆ ಧಕ್ಕೆ ತಾರದೆ ಸಂದರ್ಭಕ್ಕೆ ಪರಿಪುಷ್ಟವಾಗುವಂತೆ ಬಂದಿವೆ. ತೆಲುಗು ಜೊಮ್ಮಯ್ಯಗಳ ರಗಳೆಯಲ್ಲಿ ಬರುವ ಕಾರಣಿಕ ಮೃಗಗಳ ವರ್ಣನೆ, ಸುರಗಿಯ ಚೌಡಯ್ಯ ಮತ್ತು ಬಾಹೂರ ಬೊಮ್ಮಯ್ಯಗಳ ರಗಳೆಯಲ್ಲಿ ಬರುವ ವೃಷಭಗಳ ವರ್ಣನೆ, ಪೆರ್ಮಾಡಿರಾಯನ ಮದಿಸಿದ ಆನೆಯ ವರ್ಣನೆ ಈ ಮಾತಿಗೆ ನಿದರ್ಶನಗಳು. ಪ್ರಕೃತಿಗೆ ಚೇತನಾರೋಪಣವನ್ನು ಮಾಡುವುದು ಹರಿಹರನ ಮತ್ತೊಂದು ವೈಶಿಷ್ಟ್ಯ. ಹರಿಹರನ ಪ್ರಕಾರ ಸೂರ್ಯೋದಯವಾಗುವುದು ಶಿವಕಾರ್ಯವನ್ನು ನೋಡುವುದಕ್ಕೆ, ಶಿವಮಹಿಮೆಯನ್ನು ಕಾಣುವುದಕ್ಕೆ. ಉದಾಹರಣೆಗೆ—'ನಂದೀಶ್ವರಂ ಕರ್ಬನಾರ್ಪಿಸುವಂದಮಂ' ಇಂದು ನೋಡುವೆನಿಳೆಗೆ ಪೊಸತೆನಿಪ ಛಂದಮಂ ಎಂಬಂತೆ ರವಿಯುದಯ' (೬೧) ವಾಗುತ್ತದೆ. ಅನುಕ್ರಮವಾಗಿ ಬರುವ ಸೋಮವಾರ 'ಪನ್ನಗಧರಂ ನಿನ್ನಂ ಮೆಚ್ಚಿದಪಂ ಬನ್ನಿಮೆಂದತ್ಯಾದರದಿಂ ಕರೆವಂತೆ' (೫೧) ಹರಿಹರನಿಗೆ ಕಾಣುತ್ತದೆ.

ಒಳ್ಳೆಯ ಕವಿಗಿರಬೇಕಾದ ಸಮಕಾಲೀನ ಪ್ರಜ್ಞೆ ಹರಿಹರನಲ್ಲಿ ಚೆನ್ನಾಗಿ ಕಂಡುಬರುತ್ತದೆ. ಅಂದಿನ ಸಮಾಜದ ಪ್ರಧಾನ ಅಂಶವಾದ ವೀರಶೈವ ಮತ್ತು ಜೈನಧರ್ಮದ ಘರ್ಷಣೆ ಈ ಸಂಕಲನದ ರಗಳೆಗಳ ಮುಖ್ಯವಸ್ತು. ಬಾಹೂರ ಬೊಮ್ಮಯ್ಯ ಬರುವಾಗ ಜೋಳದ ರಾಶಿಯನ್ನು ಹಾಕಿಕೊಂಡು ವ್ಯಾಪಾರಿಯೊಬ್ಬನ 'ಶಂಕರಗಂಡನಂ ಕೊಳ್ಳಿರೇ' (೪೭) ಎನ್ನುವ ಮಾತಿನಿಂದ ಅಂದು ಜೋಳಕ್ಕಿದ್ದ ಮತ್ತೊಂದು ಹೆಸರು ತಿಳಿದುಬರುತ್ತದೆ. ಮುಸುಟೆಯ ಚೌಡಯ್ಯ ಊರಿಗೆ ಬರುವಾಗ ದಾರಿಯಲ್ಲಿ ಕಂಡುಬಂದ ಕೇಳಿಕೆ (೧೨) ಯಿಂದ ಅಂದಿನ ಕಾಲದ ಶವಸಂಸ್ಕಾರದ ಸಂದರ್ಭದಲ್ಲಿ ನಡೆಯುವ ಮೆರವಣಿಗೆಯ ಚಿತ್ರ ಸಿಗುತ್ತದೆ. ಇದರ ಜೊತೆಗೆ ಮಕ್ಕಳು ಆಡುತ್ತಿದ್ದ 'ಚಿಟ್ಟುಮುರಿಯಾಟ' (೧೪) ಮುಂತಾದ ಹಲವಾರು ಸಂಗತಿಗಳನ್ನು ಗಮನಿಸಬಹುದು.

ಆಡುನುಡಿಯನ್ನು, ದೇಸೀಯ ನುಡಿಗಟ್ಟನ್ನು ಹರಿಹರ ಚೆನ್ನಾಗಿ ಬಳಸಿ ಕೊಂಡಿರುವುದನ್ನು ನಾವು ಜೊಮ್ಮಣ್ಣ ಮತ್ತು ಕೇಶಿರಾಜದಣ್ಣಾಯಕರ ಪ್ರಸಂಗದಲ್ಲಿ ಕಾಣಬಹುದು. ಜೊಮ್ಮಣ್ಣನ ಕೀರ್ತಿಯನ್ನು ಕೇಳಿ ಆತನನ್ನು ನೋಡಲು ಬಂದು ಪಲ್ಲಕ್ಕಿಯಿಂದಿಳಿದು ಜೊಮ್ಮಣ್ಣನ ಮನೆಯ ಒಳಗಡೆಗೆ ಹೋಗುತ್ತ 'ಜೊಮ್ಮಣ್ಣನೆಲ್ಲಿಗೆ ಹೋದ ಇಂದುಧರನ ಪ್ರತಾಪಾಗ್ನಿ ಎಲ್ಲಿಗೆ ಹೋದ' ಎಂದು ಕೇಳುತ್ತ ಮನೆಯ ಒಳಗೆ ಹೋಗಿ ಪಿಶಿತಮಾಲೆಯನ್ನು ಕಂಡು ಹೇಸಿ ಊಟ ಮುಂದಿನ ಶಿವಾಲಯಕ್ಕೆ ಹೋದನು. ಇತ್ತ ಜೊಮ್ಮಣ್ಣ ಬೇಟೆಯನ್ನು ಮುಗಿಸಿ ಮನೆಗೆ ಬಂದು 'ಬಂದರುಂಟೇ ಶಿವನ ಭಕ್ತರಟಿಸು ತಲಿಂದು, ಎಂದು ತನ್ಮರಸಿಯರನೆಂದಿನಂದದಿ' ಕೇಳುತ್ತಾನೆ. ಆಕೆ ನಡೆದ ಸಂಗತಿಯನ್ನು ತಿಳಿಸಲು ಜೊಮ್ಮಣ್ಣ ಶಿವಾಲಯಕ್ಕೆ ಬಂದು ದಣ್ಣಾಯಕರನ್ನು ಕಂಡು 'ಎನ್ನ ಮನೆ ಯಿರ್ದಂತೆ ಇಲ್ಲಿ ನೀವಿರ್ಪಿರೇ' ಎನ್ನುತ್ತಾನೆ. ಅದಕ್ಕೆ ದಣ್ಣಾಯಕರು 'ಸೋಮಧರನಾ ಪರನು ಪೂಜೆಗಳನೊಳಕೊಂಡು ಇರ್ದಪನಿದಕ್ಕೇನ ಮಾಡುವಂ' ಎನ್ನುತ್ತಾರೆ. ಹೀಗೆ ಹಲವಾರು ಪ್ರಸಂಗಗಳು ಪ್ರಸ್ತುತ ಸಂಕಲನದಲ್ಲಿ ದೊರೆಯುತ್ತವೆ.

ಹರಿಹರನ ರಗಳೆಗಳಲ್ಲಿ ಅಲಂಕಾರಗಳು ಎಡೆಪಡೆದುಕೊಂಡಿವೆ. ಅವುಗಳಲ್ಲಿ ಮುಖ್ಯವಾದುವು ರೂಪಕ, ಉಪಮೆ, ಉತ್ಪ್ರೇಕ್ಷೆಗಳು. ಅವುಗಳಿಗೆ ಮಹಾಕವಿ ಪ್ರತಿಭೆಯ ಔಚಿತ್ಯವಿರುವುದರಿಂದ ಅವು ತಮ್ಮ ನಿರ್ದೇಶಿತ ಗುರಿಯನ್ನು ಯಶಸ್ವಿಯಾಗಿ ಮುಟ್ಟುತ್ತವೆ. ಹರಿಹರನ ಭಕ್ತರು 'ಉರಿಯಂತೆ ಸಿಡಿಲಂತೆ ಶಿವದೂಷಕಾವಳಿಗೆ, ಸಿರಿಯಂತೆ ಸುಖದಂತೆ ಹರನ ಶರಣಾವಳಿಗೆ' ಕಂಡುಬರುತ್ತಾರೆ. ಹರಿಹರನ ಶಕ್ತಿಪೂರ್ಣ ಆಲಂಕಾರಿಕ ಅಭಿ ವ್ಯಕ್ತಿಗೆ ಬಾಹೂರ ಬೊಮ್ಮಯ್ಯ ಕಲ್ಲುನಂದಿಗೆ ಕಬ್ಬನ್ನು ತಿನ್ನಿಸುವ ಸಂದರ್ಭದಲ್ಲಿ ಎತ್ತನ್ನು ವರ್ಣಿಸುವಾಗ 'ಹೊಳೆವ ಚಂದ್ರಿಕೆಗೆ ಕೈಕಾಲ್ಮೊಗಂ ಮೂಡಿತೋ'[1] ಎನ್ನುವ ಮಾತು ನಿಲ್ಲುತ್ತದೆ. ಜನಜೀವನದಲ್ಲಿ ಬೆಳದಿಂಗಳು ತರಬಹುದಾದ ಪ್ರಶಾಂತತೆ ಉಲ್ಲಾಸಗಳು ಸರ್ವವಿದಿತ. ಅಂತೆಯೇ ಕಲ್ಲುಬಸವ ಚೇತನಗೊಂಡು ಬಂದುದರಿಂದ ಧಾರ್ಮಿಕ ಘರ್ಷಣೆಯ ಕಿರಿಕಿರಿಗೆ ಒಳಗಾಗಿದ್ದ ಶರಣಾವಳಿಯಲ್ಲಿ ಉಂಟಾಗುವ ಮಾನಸಿಕ ಶಾಂತಿ ಮತ್ತು ಉಲ್ಲಾಸವನ್ನು ಈ ಮಾತು ಬಹಳ ಸಮರ್ಥವಾಗಿ ಸೂಚಿಸುತ್ತದೆ. ಹೀಗೆಯೇ ಸುರಗಿಯ ಚೌಡಯ್ಯನಿಗೆ ಶಿವದರ್ಶನವಾಗದಿದ್ದಾಗ ಅವನಿಗೆ 'ಕಂಗೆ ಮುಳ್ಳಡ್ಡವಾದಂತೆ' ಸಂಕಟವಾಗುತ್ತದೆ. ಕೇಶಿರಾಜ ದಣ್ಣಾಯಕ ತನ್ನ ಮನೆಗೆ ಬರಲು ನಿರಾಕರಿಸಿದಾಗ ತೆಲುಗು ಜೊಮ್ಮಯ್ಯ 'ಪೊಸೆದ ಪೂವಿನ ತೆಱದೆ' ಆಗುತ್ತಾನೆ. ಹೀಗೆ ಅರ್ಥಪೂರ್ಣವಾಗಿ ಹೊಂದಿಕೊಂಡ ಅನೇಕ ಅಲಂಕಾರಗಳು ದೊರೆಯುತ್ತವೆ.

---

[1] ಕುಮಾರವ್ಯಾಸನ ಭಗದತ್ತನ ಆನೆಯ ವರ್ಣನೆ 'ಕೈಕಾಲ್ ಮೂಡಿತೋ ನಭಕೆ' ಎನ್ನುವ ಮಾತಿನೊಡನೆ ಈ ಮಾತನ್ನು ಹೋಲಿಸಬಹುದು.

ಒಟ್ಟಿನಲ್ಲಿ ಯಾವ ದೃಷ್ಟಿಕೋನದಿಂದ ಪರಿಶೀಲಿಸಿದರೂ ಹರಿಹರ ಕನ್ನಡ ಸಾಹಿತ್ಯದ ಮಹಾಕವಿಯಾಗಿ ನಿಲ್ಲುತ್ತಾನೆ. ಆತ ತನ್ನ ಸಮಕಾಲೀನ ಕವಿ ಜೀವನದ ಕ್ರಾಂತಿ ಕಾರಿಯಾಗಿದ್ದಾನೆ. ಮಹಾಭಕ್ತನಾಗಿ ಮೆರೆದಿದ್ದಾನೆ. ತನ್ನ ಅನಂತರದ ಕವಿಗಳಿಗೆ ಸ್ಫೂರ್ತಿಯಾಗಿ ಮಾದರಿಯಾಗಿ ಅವರ ಕೃತಿಗಳ ವಸ್ತುವಿಗೆ ಆಕರ'ವಾಗಿ ನಿಂತಿದ್ದಾನೆ. "ಜೈನ ಕವಿಗಳಲ್ಲಿ ಪಂಪನಿಗೆ ಯಾವ ಮರ್ಯಾದೆ ಇದೆಯೋ ಅದೇ ಮನ್ನಣೆ ವೀರಶೈವ ಕವಿಗಳಲ್ಲಿ ಹರಿಹರನಿಗೆ ಸಂದಿದೆ. ಅವನ ಅನಂತರ ಬಂದ ಅನೇಕ ಶಿವಕವಿಗಳು ಅವನ ಪಾದಕ್ಕೆ ಒಂದು ಹೂವನ್ನು ಹಾಕಿ ನಮಸ್ಕಾರ ಮಾಡಿದ ಹೊರತು ಕಾವ್ಯರಚನೆಗೆ ಕೈಹಾಕರು. ಇದಕ್ಕೆ ಕಾರಣ ಅವನು ಶಿವಕವಿಯಾಗಿರುವುದೊಂದೇ ಅಲ್ಲ, ಅವನ ಕವಿತೆಯ ಮಾರ್ಗ ರಸಸ್ಯಂದಿಯಾಗಿಯೂ ಇರುವುದು"[2]. ಷಡಕ್ಷರದೇವ ಹೇಳುವ "ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀವರನಾದಂ ಮತ್ತ ವಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್" ಎನ್ನುವ ಮಾತು ಹರಿಹರನಿಗೆ ಸಮರ್ಥ ಕವಿಯೊಬ್ಬ ನೀಡುವ ಅತ್ಯುಚ್ಚ ಪ್ರಶಸ್ತಿ. ಈ ಪ್ರಶಸ್ತಿಗೆ ಅರ್ಥಪೂರ್ಣ ಅಭಿ ವ್ಯಕ್ತಿಯಾಗಿ ನಿಲ್ಲುವುದೇ ಹರಿಹರನ ವೈಶಿಷ್ಟ್ಯ.

## iv ಹಸ್ತಪ್ರತಿಗಳ ವಿವರ

ಪ್ರಕೃತ ಸಂಕಲನವನ್ನು ಎರಡು ಹಸ್ತಪ್ರತಿಗಳು ಮತ್ತು ಡಾ|| ಫ. ಗು. ಹಳಕಟ್ಟಿ ಯವರ ಅಚ್ಚಿನ ಪುಸ್ತಕದ ಸಹಾಯದಿಂದ ಸಂಪಾದಿಸಿದೆ. ಸಂಪಾದನೆಗಾಗಿ ಬಳಸಿಕೊಂಡ ಹಸ್ತಪ್ರತಿಗಳ ವಿವರ ಹೀಗಿದೆ—

'ಕ' ಇದು ಕನ್ನಡ ಅಧ್ಯಯನ ಸಂಸ್ಥೆಯ K. 358ನೆಯ ಸಂಖ್ಯೆಯ ತಾಳೆಗರಿ ಪ್ರತಿ. ಈ ಕಟ್ಟಿನಲ್ಲಿ ಒಟ್ಟು 231 ಗರಿಗಳಿದ್ದು ಸುಮಾರು 97 ರಗಳೆಗಳಿವೆ. ಇದರ ಉದ್ದ 12·4"ಅಗಲ 1 8". ಓಲೆಯ ಪ್ರತಿಯೊಂದು ಕಡೆಯೂ ಸು. 12 ಪಂಕ್ತಿಗಳು ಮತ್ತು ಸು. 85 ಅಕ್ಷರಗಳಿವೆ. ಶಕಟರೇಫದ ಬಳಕೆಯಿದೆ. 86ನೆಯ ಪತ್ರದಲ್ಲಿ ಸುರಗಿಯ ಚೌಡಯ್ಯ ಗಳ ರಗಳೆ, 89 ನೆಯ ಪತ್ರದಲ್ಲಿ ಮುಸುಟಿಚೌಡಯ್ಯಗಳ ರಗಳೆ, 110 ನೆಯ ಪತ್ರದಲ್ಲಿ ತೆಲುಗಜೊಮ್ಮಣ್ಣಗಳ ರಗಳೆ, 173 ನೆಯ ಪತ್ರದಲ್ಲಿ ಕೋವೂರಬೊಮ್ಮಯ್ಯಗಳ ರಗಳೆ, 180 ನೆಯ ಪತ್ರದಲ್ಲಿ ಬಾಹೂರಬೊಮ್ಮಯ್ಯಗಳ ರಗಳೆಗಳಿವೆ. ಈ ಪ್ರತಿ ಸಾಕಷ್ಟು ಹಳೆಯದಿದ್ದು ಶುದ್ಧವಾಗಿದೆ. ಅಕ್ಷರಗಳು ಸ್ಫುಟವಾಗಿವೆ. ಇದರಿಂದ ಮುದ್ರಣ ಪ್ರತಿ ಯನ್ನು ತಯಾರಿಸಿದೆ.

---

[1] ಮಹಾದೇವಿಯಕ್ಕನ ಪುರಾಣ ಮತ್ತು ರೇವಣಸಿದ್ಧೇಶ್ವರ ಪುರಾಣಗಳು.

[2] ಹಂಪೆಯ ಹರಿಹರ_ಡಾ. ಡಿ. ಎಲ್. ನರಸಿಂಹಾಚಾರ್

'ಚ' ಇದು ಕನ್ನಡ ಅಧ್ಯಯನ ಸಂಸ್ಥೆಯ N. 132 ಸಂಖ್ಯೆಯ ಮೈಕ್ರೊಫಿಲಂ ಪ್ರತಿ. ತುಂಬಾಪೂರದ ಕಲ್ಲಿನಾಥಶಾಸ್ತ್ರಿಗಳು ಪ್ರತಿಮಾಡಿದ ಕಾಗದದ ಪ್ರತಿಯಿಂದ ಈ ಮೈಕ್ರೊಫಿಲಂ ಪ್ರತಿಯನ್ನು ತೆಗೆಯಲಾಗಿದೆ. ಇದರಲ್ಲಿ 154 ಪತ್ರಗಳಿವೆ. ಪ್ರತಿಪತ್ರ ದಲ್ಲಿಯೂ ಸು. 32 ಪಂಕ್ತಿಗಳು ಮತ್ತು ಸು. 40 ಅಕ್ಷರಗಳು ಇವೆ. 92 ನೆಯ ಪುಟದಲ್ಲಿ ಮುಸುಟಿ ಚೌಡಯ್ಯ ಕಥನಂ ಪುಟ 102 ರಲ್ಲಿ ಸುರಗಿ ಚೌಡಯ್ಯ ಕಥನಂ ಪುಟ 128ರಲ್ಲಿ ಬಾಹೂರು ಬೊಮ್ಮಯ್ಯ ಕಥನಂ ಪುಟ 130ರಲ್ಲಿ ಕೋವೂರು ಬೊಮ್ಮಯ್ಯ ಕಥನಂ ಪುಟ 142ರಲ್ಲಿ ತೆಲುಗು ಜೊಮ್ಮಯ್ಯ ಕಥನಂಗಳಿವೆ. ಈ ಪ್ರತಿ ಈಚಿನಕಾಲದ್ದು 'ಕ' ಪ್ರತಿಯಷ್ಟು ಶುದ್ಧವಲ್ಲ.

'ಪ' ಡಾ. ಫ. ಗು. ಹಳಕಟ್ಟಿಯವರು ಅಚ್ಚುಹಾಕಿಸಿರುವ ಹರಿಹರನ ರಗಳೆಗಳು (1968) ಎಂಬ ಪುಸ್ತಕ. ಇದರಲ್ಲಿ ಪ್ರಸಕ್ತ ಸಂಕಲನದ ಬಾಹೂರು ಬೊಮ್ಮಯ್ಯ ಮತ್ತು ತೆಲುಗು ಜೊಮ್ಮಯ್ಯನ ರಗಳೆಗಳಿಗೆ ಪಾಠಾಂತರ ಸಂಕಲನ ಮಾಡಿದೆ.

ಎಂ. ಎನ್. ಲೀಲಾವತಿ.

# ೧. ಸುರಗಿಯ ಚೌಡಯ್ಯಗಳ ರಗಳೆ

ಕಂ॥ ಸುರರಾಜರಾಜನಾನತ
ಸುರಧೇನು ಪುರಾರಿ ಹಂಪೆಯ ವಿರೂಪಾಕ್ಷಂ
ಗರಳಧರಂ ನೆಲಕಿಮೆಲಕಿದಂ
ಸುರಗಿಯ [1]ಚಾವುಂ[1]ಡರಾಯನಂ ಧಾರುಣಿಯೊಳ್

ಲಲಿತ ರಗಳೆ॥ ಉತ್ತರದಿಶಾಭಾಗದೊಳಗೊಂದು ಶಿವಪುರಂ
ಬಿತ್ತರಿ[2]ಸಲ್[2]ರಿದೆನಿಸುತಿರ್ಪುದುತ್ತಮ ಕರಂ
ಅಲ್ಲಿರ್ಪನೊರ್ವ ಶಿವಭಕ್ತನಾನಂದದಿಂ
ಸಲ್ಲೀಲೆಯಿಂ ಸಕಳ ಶಿವಭಕ್ತವೃಂದ[3]ದಿಂ[3]
ಸುರಗಿಯ ಚವುಂಡರಾಯಂ ತನ್ನ ನಾಮ[4]ವ[4]ದು
ಪುರಹರನನೊಲುಮೆಯಿಂದರ್ಚಿಸುವ ನೇಮವದು
ನಿ[5]ಚ್ಚಟಂ[5] ನಿರ್ಮಳಂ ನಿರುಪಮಂ ಕಡುಮಾನಿ
ಅಚ್ಚ ಶಿವಭಕ್ತನುತ್ಕೃಷ್ಟನೀಶಧ್ಯಾನಿ
ಮಾಡು[6]ವತಿ[6] ನೇಮವ[7]ದನೇನೆಂಬೆನ[7]ಮ್ಮಮ್ಮ
ನೋಡಬಾರ[8]ದ[8]ಘಟಿತ[9]ವಘಟಿತವದ[9]ಮ್ಮಮ್ಮ
ಉದಯಸಮಯದೊಳೆದ್ದು [10]ನಿಳಯ[10]ಮಂ ಪೊಱಮಟ್ಟು
ಸದಮ[11]ಳಂ ಶಿವನ ಭಕ್ತಿಯನೆ ತಾಂ[11] ಮುಂದಿಟ್ಟು
ಬಂದು ಕೊಂಡದೊಳಂದು ಶುದ್ಧಾಂಗನಾಗುತಂ
ಸಂದಣಿಪ [12]ಪುಳಕದೊಳು ಪೊಗಳಂ ಕೊ[12]ಯ್ವುತಂ
ಶರ್ವನಂ ಕಾಣ್ಬ ತವಕಂ ತನಗೆ [13]ಮಿಗಿಲಾಗಿ[13]
ಶರ್ವಭರವಶಚಿತ್ತದುತ್ತ[14]ಮಾನಸ[14]ನಾಗಿ
ನಡೆತಂದು ಶಿವನಿಳಯಮಂ ಹರುಷದಿಂ [15]ಪೊ[15]ಗಲು
[16]ಕಡುನೇಹದಿಂ ನೋಳ್ಪ[16] ಜನದ ಸಂದಣಿ ಮಿಗಲು

---

1 ಚಾಂ (ಕ) 2 ಸೆಯ (ಚ) 3 ನುಂ (ಕ) 4 ಮ (ಚ) 5 ಶ್ಚಲಂ (ಚ) 6 ವಾ (ಚ) 7 ದು ಧರೆಗೆ ಹೊಸತ (ಚ) 8 ದುಅ (ಚ) 9 ಕಾವುದಕ್ಕ (ಚ) 10 ಭವನ (ಚ) 11 ಳ ಶಿವನಂ ಶಿವನ ಭಕ್ತಿಯಂ (ಚ) 12 ಪೂದೋಂಟದೊಳಗೆ ಪೂಗೊ (ಕ) 13 ಹಿರಿದಾಗೆ (ಚ) 14 ಮಂ ತಾ (ಚ) 15 ಹೊ (ಕ) 16 ನಡುನೇಮುಮಂ ಮಾಳ್ಪ (ಚ)

ಭರದ ಮೊನೆಮುಱಿದು ಕಾಣದೆ ಕಂದಿ ಕುಂದುತಂ
ಹರಹರ ನಮ[1][ಶ್ಶಿವಾಯೆಂದೆಂದು][1] ಕೊರಗುತಂ
ಶಿವನನೀಕ್ಷಿಸುವ ನಯನಕ್ಕೆ ಮಱೆಯಾಗುತಿರೆ
[2]ಭ[2]ವನ ನೋಟಕ್ಕೆ ನಡುವಡ್ಡ[3]ಮಾ[3]ಗುತ್ತಮಿರೆ
ಬಾಗಿಯಂತಿಂತೊಲೆದು ಕುಗ್ಗಿ ಮಿಗೆನೋಡುತುಂ
ತೂಗಿ ಕುಸಿದೆದ್ದು ಕು[4]ಳ್ಳಿರ್ದು ಮಿಗೆ[4]ನೋಡುತುಂ
ಕಂಗೆ ಮಱೆ ತನ್ನಯ ಮನದ ಕಂಗೆ ಮಱೆಯಾಗೆ
ಕಂಗೆ ಮುಳ್ಳಡ್ಡ[5]ವಾ[5]ದಂತೆ ಸಂಕಟ[6]ವಾ[6]ಗೆ
ಮತ್ತೆ ಮತ್ತಡಿಗಡಿಗೆ ಪೊಡಮಡಲು 'ನೆನೆವುತಿರೆ'
ಎತ್ತಲುಂ ತನ್ನ ನೋಟಕ್ಕೆ ತೆಱಹಿಲ್ಲದಿರೆ
ಸುಯ್ದು ಸಿಗ್ಗಾಗಿ ಕಡುಚಿಂತೆಯಿಂ ನೋ[8]ಡುತುಂ[8]
ಎಯ್ದೆ [9]ಕೈಯೊಳಗಿರ್ದರಳ್ಗಳುಂ[9] ಬಾಡುತುಂ
ಎಂತಕ್ಕೆ ಮಧ್ಯಾಹ್ನ ಸಮಯದೊಳ್ ತೆಱಹಾಗೆ
ಚಿಂತಿಸು[10]ತ್ತಳಲುತಂ[10] ಕಣ್ಣನೀರ್ ಕಡಲಾಗೆ
ಏನಯ್ಯ ತೆಱಹುಗುಡದಿ[11]ರ್ಪರೇ[11] ಶಂಕರಾ
ನಾನಾ ನಿರೋಧದೊಳಗಿರಿಸುವರೆ ಶಶಿಧರಾ
ನೋಡದೆಂತಿರ್ಪನೆನ್ನಯ ಕಣ್ಣ ಪುಣ್ಯವೇ
ನೋಡುವಡೆ ಸುರರೆಣಿಸಲರಿದೆನಿಪಗಣ್ಯವೇ
ತವನಿಧಿಯೆ ಮಹನಿಧಿಯೆ ಸರ್ವನಿಧಿಗಳ ನಿಧಿಯೆ
ಭುವನ ಭವನ ಪ್ರಕಾಶಿತ ನೂತ್ನದೀಧಿತಿಯೆ
ತತ್ವಮಯ ಶಾಂತಮಯ ನಿತ್ಯಮಯ ಶಂಭುವೇ
ಸತ್ವರಜ[12]ತಾಮಸಗುಣೋ[12]ರಹಿತ [13]ನಿತ್ಯ[13]ವೇ
ಕಾಣದಿರ್ದಡೆ ನಿಮಿಷಯೆನಗೆ ಶತಯುಗವಾಯ್ತು
ಕಾಣದಿರ್ದಡೆ ಕಣ್ಗೆ ಕತ್ತಲೆಯಮಯವಾಯ್ತು
ನೋಡದಿರಲಾಱೆನಿನ್ನೆಂತು ಮಾಡುವೆನಯ್ಯ
ನೋಡುವಡೆ[14]ನಗೆ ದೇವ ಮಱೆಮಾಡಬೇಡಯ್ಯ[14]

---

[1] ಶಿವಾಯಯೊಂದೆಂದು (ಕ) ಶಿವಾಯಯೆಂದು (ಚ) [2] ಶಿ (ಚ) [3] ಲಾ (ಚ) [4] ಳಿದ್ದಿರ್ದು (ಕ) [5] ಮಾ(ಚ) [6] ಮಾ (ಚ) [7] ನೆರೆಬರಲು (ಚ) [8] ವುತಂ (ಚ) [9] ಕೈಸಾರ್ಚುತಿರಲೊಡನೊಡನೆ (ಚ) [10] ತೆ ಬಳಲುತ್ತೆ (ಕ) [11] ರ್ಪಿರಿ (ಚ) [12] ತಮಸಮೋಗುಣ (ಕ) [13] ಲಿಂಗ (ಚ) [14] ನೀನೀಯೆಯೆಂತು ಜೀವಿಪೆನಯ್ಯ (ಕ)

ದಿಟ್ಟವಮೂಱಱ ಮಹಿಮ ಕೇ[1]ಳಿಂದು[1] ಮೊದಲಾಗಿ
ದಿಟ್ಟವಾರಿಯ ನೇಮದಿರವನೊಚ್ಚತವಾಗಿ
ಕೈಕೊಂಡೆನಿದುನೇಮವಿದುನೇಮವಿನ್ನೆನಗೆ
ಲೋಕೈಕಬಂಧುವೇ [2]ನಡೆಯಿ[2]ಸುವುದಿದನೆನಗೆ
ಎನ್ನ ನೋಟದ ನಡುವೆ ನಿನಗಡ್ಡವಾದರಂ
ನಿನ್ನಾಣೆ ತೀ[3]ರ್ಚಲಗಿನಿಂ[3] ಕಳವೆನನ್ಯರಂ
ಎಂದಲ್ಲಿ ಮೆಯ್ಯಿಕ್ಕಿ ನಿತ್ಯನೇಮಂ ಮಾಡಿ
ಇಂದುಧರನೊಡನೆ ಕಡುಸಲಿಗೆಯಿಂ ಮಾತಾಡಿ
ನಡೆತಂದು ಶಿವ[4]ನಲ್ಲಿ ಕಡು[4]ನಿಷ್ಠೆಯಂ ಪಡೆದು
ಮೃಡನಣುಗ[5]ನೊಂದು ಸುರಗಿಯನಳವಡಲ್[5] ಪಿಡಿದು
ದಿಟ್ಟವಾರಿಯ ನೇಮ[6]ಮಂ[6] ತಪ್ಪದೊಪ್ಪುತಂ
ನಿಷ್ಠೆಗೀಶ್ವರನೊಲಿದು ಕೌತುಕವನಪ್ಪುತಂ
[7]ಕಲಿ[7]ನಿಷ್ಠೆವಂತನಭಿಮಾನಿ ನಿಚ್ಚಳನೆಂದು
ಕೆಲಬಲಕೆ ಸಾರ್ವ[8]ನಲ್ಲು[8]ಬ್ಬಟೆಯ ಛಲಿಯೆಂದು
ಸುರಗಿಯ ಚವುಂಡರಾಯಂ ಬರ್ಪ [9]ಹೊತ್ತಿನೊಳ್[9]
ಹರನಾರುನಂ ಹೊದ್ದಲೀಯನಾ [9]ಹೊತ್ತಿನೊಳ್[9]
ಹೂವನೊಳಗಾಗಿ ಮಱೆಮಾಡಿಕೊಂಡಿರಲಮ್ಮ
[10]ಆವುದುಂ ಅಡ್ಡಲಾಗಿರಿಸಿಕೊಂಡಿ[10]ರಲ[11]ಮ್ಮ[11]

ಇಂತು ಶಿವನಂಜುತಿರೆ ನೇಮ[12]ವದು ನಡೆವು[12]ತಿರೆ
ಸಂತತಂ ಶಿವಭಕ್ತಿಮಿಕ್ಕು ಕಳೆಯೇಱುತಿರೆ
ಒಂದುದಿವಸಂ ಶಂಕರಂ ಬಂದು ಕನಸಿನೊಳು
ನಿಂದು ಚಾವುಂಡರಾಯಂಗೆ [13]ನಿಜಭಾವದೊಳು[13]
ಹಸಿದೆ[14]ನೆಲೆ[14] ಮಗನೆ ಹಸಿದೆಂ ಕಂದ ಕೇಳೆಂದು
ಬೆಸಸಿ ಭಾಳಾಂಬಕಂ ಪೋಗೆ ಹರುಷದೊಳಂದು
ಎಚ್ಚೆತ್ತು ಕಂಡೆಱತದು ಪುಳಕಮಂ ಸಂತೈಸಿ
[15]ಮು[15]ಚ್ಚಿ ನೆಱತ[16]ನ[16]ಚ್ಚಿ ಕನ[17]ಸಂ[17] ಮನಸಿನೊಳ್ ನಿಲಿಸಿ

---

1 ಳ್ನಾಳೆ (ಕ) 2 ಕರುಣ (ಕ) 3 ರ್ಚ ತೊಲಗಿಸಿ (ಕ) 4 ನಿಳಯದೊಳು (ಚ) 5 ನಳವಡಲು ಸುರಗಿಯೊಂದು (ಚ) 6 ವುಂ (ಕ) 7 ಸಲೆ (ಚ) 8 ನೆನಲು (ಚ) 9 ಸಮಯದೊಳು (ಚ) 10 ನಾವುದಮನಡ್ಡಲಾಗಿಡಿಸಿಮರದಿ (ಕ) 11 ಮ್ಮ ಬರುತಿರುವ ಸಮಯದಲಿ ತೆರೆಸರಿವುದೊಂದೆಸೆಗೆ। ಹರಹರ ನಮಃ ಶಿವಾಯೇಂನೆಂಬೆನಿ೯ ಧರೆಗೆ (ಚ) 12 ಮಂ ನಡೆಸು (ಚ) 13 ನೆಱತನಲವಿನೊಳ್ (ಕ) 14 ನ್ನೆ (ಚ) 15 ನ (ಚ) 16 ಮ (ಚ) 17 ಸು (ಚ)

*ಪನ್ನಗಧರಂ ಬೆಸಸಿತಂ ಚಿತ್ರದೊಳ್ ನಿಲಿಸಿ
ತನ್ನರಸಿ ಮೊದಲಾದ ಮಾನಿನಿಯರಂ [1]ಬರಿಸಿ[1]
ಓಗರಂ ಮೇಲೋಗ[2]ರಂಗಳಂ[2] ಮಾಡು[3]ವುದು[3]
ನಾಗಕುಂಡಲಗೆ ಸದ್ಭಕ್ತಿಯಿಂ [4]ಮಾಡುವುದು[4]
ಪೇವಾನ್ನ ದಿವ್ಯಾನ್ನಮನ್ಯತಾನ್ನಮೆಂಬಿವಂ
ದೇವಂಗೆ ಷಡುರಸಾಯನರುಚಿಗಳೆಂಬಿವಂ
ಚರಿತದಿಂ ತ[5]ಮತಮಗೆ[5] ಮಾಳ್ಪ[6]ದೆಂದ[6]ನಿತಕ್ಕೆ
ಹರ[7]ಭಕ್ತೆ[7]ಯರು [8]ಸವೆದು ತರುತಮಿರೆ[8] ನಿಮಿಷಕ್ಕೆ
ಬೋನಂಗಳಂ ಕೊಂಡು [9]ಧೂಪಾರತಿಯನಿತ್ತು[9].
ನಾನಾ ಶಿವೋತ್ಸಾಹ[10]ಮಂ[10] ಚಿತ್ರದೊ[11]ಳ್ ಪೊತ್ತು[11]
ಕರಡೆ ಕೌಸಾಳೆ ಮದ್ದಳೆಯ ನಾದಂ[12]ವೆರಸಿ[12]
ಪುರಹರನ ಶರಣಸಂಕುಳದ ಕೇಳಿಕೆ[12]ವೆರಸಿ[12]
ಬೋನಂಗಳಂ ಕೊಂಡು ಬಂದು ಶಿವನಿಳಯದೊಳ್
ಆನಂದದಿಂದಿಳಿ[13]ಪಿ[13] ನಿರ್ಮಳ ಸ್ಥಾನದೊಳ್
ಒಳಪೊಕ್ಕು ಜವನಿಕೆಯನಕ್ಕಱಿಂದಂ ಸರಿದು
ಪುಳಕವಿಮ್ಮಡಿಸಿ ಪರಿಯಾಣಂಗಳಂ ತೊಳೆದು
ಸವಿಗಂಪು ಸೆಖೆಯೇಳ್ವ ಕಳವೆಯೋಗರವಿ[14][ಕ್ಕಿ][14]
ನವರುಚಿಗಳಂಕುರಿಪ ಮೇಲೋಗರವನಿಕ್ಕಿ
ಪಕ್ವಾನ್ನ ತತಿಗಳಂ ತಂದು ತರದಿಂ [15]ಬಡಿ[15]ಸಿ
ಪಕ್ವಫಳ[16]ತತಿಗಳಂ ತಂದು[16] ನಲವಿಂದಿರಿಸಿ
ತಿಳಿದುಪ್ಪಮಂ ಹೊನ್ನಬಟ್ಟಲೊಳ[17]ಗೆಱೆ[17]ದೆಱೆದು
ಅಳವಡಲು ಮಜ್ಜಿಗೆಯನಾನಂದದಿಂ[18]ದೆಱೆ[18]ದು
ಮೆಯ್ಯಿಕ್ಕಿ ನಿಂದಿರ್ದು ಸುಖರಸದೊಳೋಲಾಡಿ
ಕಯ್ಯೆತ್ತಿ ಪೊಡ[19]ಮಟ್ಟು ಪರಿ[19]ತೋಷದಿಂ ನೋಡಿ

[1] ಕರಸಿ ಪುನ್ನತವೆನಿಪ್ಪ ಹೂರಿಗೆಯ ಪರಿಪರಿವೆರಸಿ (ಚ) [2] ರವ (ಚ) [3] ತಂ (ಚ) [4] ಸೀಡುತಂ (ಚ) [5] ನತನಗೆ (ಕ) [6] ಪೆನೆಯ (ಚ) [7] ಭಕತೆ (ಕ) [8] ಸಮೆದು ಸಮೆದು ತರಲಂದು (ಕ) [9] ರಸರಸಾಯನವಿರಿಸಿ (ಚ) [10] ವಂ (ಚ) [11] ಳಿರಿಸಿ (ಚ) [12] ಸಹಿತೆ (ಕ) [13] ಸಿ (ಚ) [14] ತ್ತು (ಕಚ) [15] ದಿರಿ (ಚ) [16] ಮು ಪಲವನಲಿ (ಚ) [17] ಗಂ (ಚ) [18] ಒಡಿ (ಕ) [19] ವಂಟು ಸಂ (ಕ)

* ಈ ಸಾಲು ಚ ಪ್ರತಿಯಲ್ಲಿಲ್ಲ.

ಚೆನ್ನನ ಮನೋ[1]ಹರನೆ[1] ಆರೋಗಿಸೆ[2]ಲೆ[3] ದೇವ
ಕನ್ನೆಯ ಮನೋರಥ[3]ನೆ[3] ಆರೋಗಿಸೆಲೆ ದೇವ*
ಎನ್ನಾಳ್ದ ಎನ್ನರಸ ಸುಖದೊಳಾರೈಸಯ್ಯ
ಎನ್ನ ಪುಣ್ಯದ ಫಳವೆ ಹದುಳವಾರೈಸಯ್ಯ
ಹಸಿದೆನೆಂದಿರುಳೆಂದು ಸುಮ್ಮ[4]ನಿರ್ದಪಿರಯ್ಯ[4]
ಪಶುಪತಿಯಿದೇಕೆ ಉಣಲೊಲ್ಲ[5]ದಿರ್ದಪಿರಯ್ಯ[5]
ಆರೋಗಿಸುವ ಪರಿಯನಱಿದೆ[6]ನೆಂದೆ[6]ನುತಲ್ಲಿ
ಕೂರಲಗನೆತ್ತಿ ಕಂಠದೊಳಾ[7]ನಿ[7]ಸಲ್ಕಲ್ಲಿ
ಶಿವಲಿಂಗ[8]ದಿಂ[8] ಶಿವನ ಹಸ್ತ[9]ವೊಂದೊ[9]ಗೆತಂದು
ಸವಿ[10]ವುದನು ಆ[10]ನಂದ[11]ದಿಂ[11] ನೋಡು[12]ತಂ ನಿಂದು[12]
ಪಂಚವದನಕ್ಕೆ ನಲವಿಂದ ನೀಡುತ್ತಮಿರೆ
ಪಂಚಮುಖನತಿಹರುಷದಿಂ [13]ತ[13]ಣಿವುತ್ತಮಿರೆ†
ದೇವಿ[14]ಯುಂ[14] ಗಣಪತಿ[15]ಯು ಷಣ್ಮುಖಂ[15] ಮೊದಲಾಗಿ
ದೇವಗಣತ[16]ತಿಗೆ[16] ನಲಿ[17]ದೀವು[17]ತಿರೆ ಪಿರಿದಾಗಿ
[18]ರೋಗಿಸಿದ ಶಿವಂ[18][ಚೌ]ಂ[19]ಡರಾಯಂಗಂಜಿ
ಧೀರನಲಗಂ ಕಿ[19]ತ್ತು[19]ಡಾರೋಗಿಸಿದನಂಜಿ
[20]ರೋಗಿಸಲ್ ಕಂಡು ಹಿಗ್ಗಿ[20]ದಂ ಹೆಚ್ಚಿ[20]ದಂ
[21]ಹಾರೈಸಿ[21] ಪುಳಕದಿಂದು[22]ರ್ವಿ[22]ದಂ ಕೊ[22]ರ್ವಿ[22]ದಂ
[23]ಇದು[23] ನೇಮವಿದು ನೇಮವಾರೈಸಲಿಕ್ಕುವೆಂ
ಸದಮಳ ಸುಧಾಮಯಸನಸುದಿನಂ ತಣಿಸುವೆಂ
[24]ಎನುತ[24] ಕರ್ಪೂರ ವೀಳಯ[25]ವನೊಲವಿಂದಿತ್ತು[25]
ಮನವಾರೆ ನಡೆನೋಡಿ ತೂಪಿಱಿದು ಕಾಪಿತ್ತು
ಬಂದಲ್ಲಿ ಮಿಕ್ಕ ಪ್ರಸಾದಮಂ ಕೈಕೊಂಡು
ಇಂದುಮೌಳಿಯ ಕೃಪೆಯನೊಲಿದೊಚ್ಚತಂಗೊಂಡು

---

1 ಸಿಥಿಯೆ (ಚ) 2 ಲೊ (ಚ) 3 ವ (ಚ) 4 ನೇಕಿರ್ದಪ್ಪೆ (ಕ) 5 ದೇಕಿರ್ದಪ್ಪೆ (ಕ) 6 ನಾನೆ (ಕ) 7 ಗಿ (ಕ) 8 ದಲಿ (ಚ) 9 ವ್ರಂ ಒ (ಚ) 10 ದುತ್ತನಾ (ಕ) 11 ದಿಂದ (ಕ) 12 ತ್ತಂದು (ಕ) 13 ದತ (ಕ) 14 ದೇವಂಗುಮಂ (ಕ) 15 ಯು (ಕ) 16 ತಿ (ಚ) 17 ದುಪರಸು (ಚ 18 ಚಾವ್ರಂ (ಕಚ) 19 ಳ್ತ (ಕ) 20 ಹೊರೆಯೇರಿ (ಚ) 21 ಆಡುತಂ (ಚ) 22 ಬ್ಬಿ (ಕ) 23 ಇಂದು (ಕ, 24 ವಿನಯದಿಂ (ಚ) 25 ಮುಮಂ ಕೊಟ್ಟು (ಚ)

* ಚೋಳಿಯಕ್ಕನ ಸುಖದ ಸುಧೆಯ ಸವಿ ನೋಡಯ್ಯ | ಚೋಳರಾಯನ ಕಣ್ಣ ಪುಣ್ಯ ಸವಿನೋಡಯ್ಯ (ಚ)

† ರಸರಸಾನ್ನಂಗಳಂ ತುತ್ತುಗೈದೂಡುತಿರೆ। ಶಶಿಧರನು ಸವಿಸವಿದು ಚಪ್ಪರಿದು ತಣಿವುತಿರೆ(ಚ)

ಇಂತು ನಿಚ್ಚಂ ಹೆಚ್ಚಿ ಹಾರೈಸಲಿಕ್ಕುತಂ
ಕಂತುಮದನಮರ್ದನನ ಭಕ್ತಿಯೊ[1]ಳ್ ನಲಿವುತಂ[1]
ಹರನ ಶರಣರ್ಗೆ ಬೇಡಿತನಿತ್ತು ತಣಿ[2]ವು[2]ತಂ
ಸುರಗಿಯ [3]ಚವು[3]ಡರಾ[4]ಯಂ[4] ಸುಖಮೊಳೊಪ್ಪು[5]ತಂ[5]
ಇರುತಿ[6]ರುತ[6] ಒಂದುದಿನ ಉದಯಸಮಯದೊ[7]ಳೆದ್ದು[7]
ಹರನ ನೇವ[8]ಕ್ಕೆ ಬರಲೆಂದು[8] ಹರುಷಂ [9]ತಾ[9]ಳ್ದು
ಬಂದು ಕೊಂಡದೊಳಂದು ಶುದ್ಧಾಂಗನಾಗು[10]ತಂ[10]
ಸಂದಣಿಪ [11]ಪೂ[11]ದೋಂಟದೊಳಗೆ ಪೂಗೊಯ್ವು[12]ತಂ[12]*
ಬಂದು ಕೊಂಡದ [13]ಬಳಿಯಲೊಪ್ಪಿದಂ[13] ಕಾಲ್ದೊಳೆದು
ನಿಂದು ಭಸಿತಮನಾಗಮಸ್ಥಾನದೊಳ್ ತಳೆದು
ಬಾಹುಬಳೆ ಕಂಠ[14]ದೊಳು ರುದ್ರಾಕ್ಷೆಗಳನಿ[14]ಕ್ಕಿ
ಸಾಹಸಾಭರಣನು[15]ತ್ಸಾಹ[15]ದೊಳ್ ಕೈಮಿಕ್ಕು
ಸುರಗಿಯಂ ತಿರುಪಿ ಜಂ[16]ಘೆಗಳ[16] ನೀಡಾಡು[17]ತುಂ[17]
ತರಹರಿಸಿ ಕೂ[18]ರ್ಮೆಯೊಳು[18] ನಿಂದು ಪುಟವೇ[19]ಳು[19]ತುಂ
ಬರು[20]ತ[ವಿ]ರಲತ್ತಲಿತ್ತಲ್[20] ಶಿವಾಲಯದೊಳಗೆ
ಹರನೊಳಗೆ ನೇಮ[21]ವಂ[21] ಮಾಡಲೆಂದೊ[22]ಳ[22]ಗೆ ಮಿಗೆ
ಅಱಿಯದೆ ಹೊಸಬರಿರ್ವರುಂ ನಡುವೆ ಬಂದಿರಲು
ಮಱಿಯಾಗಿ ದಿಟ್ಟಗಿಟ್ಟಣಿಸಿ ನಿಂದಿರ್ದಿರಲು
ಇಱಿ[23]ದಿಕ್ಕೆಲಕ್ಕೆ[23] ಈಡಾಡುತುಂ [24]ನಡೆತಂ[24]ದು
ಕಱಿಗೊರಲಸಂ ನೇಹದಿಂದಪ್ಪಿಕೊಂಡಂದು
ಮಱಿಯಾಗೆ ನಿಮಿಷವದು [25]ಯುಗ[25]ವಾದುದೆನಗರಸ
ಮಱಿಮಾಳ್ಪರೇ ನಿನ್ನ ಭಕ್ತಂಗೆ ಹೇಳರಸ
ಎಂದೊಳಗೆ ನೇಮ[26]ವಂ[26] ಮಾಡುತ್ತ[ಲಿ]ರಲಲ್ಲಿ
ಬಂದು ನೆಱಿ[27]ದಿ[27]ತ್ತು ಭರದಿಂದ ಪುರಜನವಲ್ಲಿ
ನೆರೆದು [28]ತಮ್ಮೊಳಗೆ ಬೆ[28]ಱಗಾಗಿ ನುಡಿದ[29]ರು[29] ನೋಡ
ಹರಭಕ್ತಗಿದು ಗುಣವೆ ಧರೆಗೆ ಚಿತ್ರಂ ನೋಡ

---

[1]ಳು ಹೆಚ್ಚುತಂ (ಚ) [2]ಸು (ಚ) [3]ಚಾ೦ (ಚ) [4]ಜಾ (ಚ) [5]ತುಂ (ಕ) [6]ರಲು (ಚ) [7] ಳೇಳ್ದು (ಕ) [8] ಕ್ಕೆಂದು ಬರಲು (ಚ) [9] ದಾ (ಚ) [10] ತುಂ (ಕ) [11] ಹೂ (ಚ) [12] ತುಂ (ಕ) [13] ತಡಿಯ ಲೊಪ್ಪಿರಲು (ಕ) [14] ಮಾಲೆಗಳನೊಪ್ಪಿರಲಿ (ಕ) [15] ತ್ಸವ (ಕ) [16] ಗಳಮು (ಕ) [17] ತಂ (ಚ) [18] ರ್ಮದೊಳೆ (ಚ) [19] ರು (ಚ) [20] ತವಿರಲತ್ತಲಿತ್ತಲು (ಕ) ತಿರಲ್ಕಿತ್ತಲತ್ತಲು (ಚ) [21] ಮಂ (ಚ) [22] ಳಗೊಳ (ಚ) [23] ದು ಪೊರಯಿಂಕೆ (ಚ) [24] ಬಂ (ಕ) [25] ಜುಗ (ಕ) [26] ಮಂ (ಚ) [27] ಯಿ (ಕ) [28] ಬೆ (ಚ) [29] ರು ತಮ್ಮೊಳಗೆ (ಚ)

*ಶರ್ವನಂ ಕಾಣ್ಬ ತವಕಂ ತನಗೆ ಪಿರಿದಾಗೆ। ಶರ್ವಭರವಸಚಿತ್ತದುತ್ತಮಾನನಾಗಿ (ಚ)

ಕೊಂದು ನೇಮಂ ಮಾಳ್ಪುದಿದು ಹೊಸತು ಮೇದಿನಿಗೆ
ಎಂದುವುಂ ಕಂಡಱಿಯೆಯುಬ್ಬಟೆಯ ಧಾರುಣಿಗೆ
ಹೊಱಗೆ ಹೆಣನೊಳಗೆ ನೇಮಂ ಕ[1]ರಂ[1] [2]ಹಸನಾ[2]ಯ್ತು
ಪೊಱಮಡಲು ನೋಡಿಕೊಂಬೆವು [3]ಭಕ್ತಿ[3] ಲೇಸಾಯ್ತು
ಎನುತಿ[4]ರಲು[4] ಪೊಱಮಟ್ಟನಪ್ರತಿಮನಮ್ಮುಮ್ಮ
ಮನಸಿಜಾರಿಯ ನೇಮಸಂಪನ್ನನಮ್ಮುಮ್ಮ
ನಡೆತರು[5]ತೆ[5] ಕೆಲಬಲ[6]ದೊಳಿರ್ದ[6] ಹೆಣನಂ ನೋಡಿ
ಮೃಡನಣುಗ[7]ನಿರ್ವ[7]ರುಮನೇಳೇಳೆನಲು ಕೂ[8]ಡಿ[8]
ಎ[9]ಳ್ದು[9] ಕೈಮುಗಿದಿರ್ವರುಂ ಮುಂದೆ ನಿಂದಿರಲು
ತಾಳ್ದು ಕೌತುಕಮನಾ ಪುರಜನಂ ನೆರೆದಿರಲು
ಪುಷ್ಪವೃಷ್ಟಿಗಳೆಱಗಿದವು ಗಗನತಳ[10]ದಿಂದೆ[10]
ಪುಷ್ಪಕಂ ಬಂದುದಗಜಾವರನ [11]ದಯದಿಂದೆ[11]
ಬಂದ ಪುಷ್ಪಕದೊಳಗೆ ನಿಂದಿ[12]ರ್ವ[12]ರುಂ ಸಹಿ[13]ತ[13]
ಸಂದಣಿಸಿ ನೆಗೆದಂ ಚವುಂಡರಾಯಂ ವಿದಿತ
ಆಗಳಾ ಪುರಜನಂ ಬೆಱಗಾಗಿ ನೋಡುತಿರೆ
[14]ರಾಗದಿಂದಂ ಸರ್ವ[14]ರೆಲ್ಲ ಕೊಂಡಾಡುತಿರೆ
ಬಂದು ರಜತಾದ್ರಿಯಂ ಪುಗುವಾಗಳೀಶ್ವರಂ
ನಿಂದಡ್ಡ[15]ವಾದ[15]ರಂ ಸಾರೆನು[16]ತೆ ಶಂಕರಂ[16]*
ಸುರಗಿಯ ಚವುಂಡರಾಯಂ ಬಂದಪಂ ತೊಲಗಿ
ಉರವಣೆಯ ದಿಟ್ಟ[17]ವಾ[17]ರಿಯ ನಿಚ್ಚಟಂ ತೊಲಗಿ
ನಡುವಡ್ಡ[18]ವಾದ[18]ರಂ ಸೈರಿಸಂ ಕಡುಮಾನಿ
ಪೊಡವಿಯೊಳಗಧಿಕನೆನ್ನಯ [19]ದರ್ಶ[19]ನಧ್ಯಾನಿ
ಎಂದಡ್ಡ[20]ವಾದ[20]ರಂ ತೊಲಗಿಸು[21]ತ ಬರಲಲ್ಲಿ[21]
ಬಂ[22]ದನೀಶ್ವರನಲ್ಲಿಗಾ[22]ನಂದಮಯ[23]ನಲ್ಲಿ[23]

---

1 ರ (ಕ) 2 ಹೊಸದಾ (ಚ) 3 ಬಕುತಿ (ಕ) 4 ರಲ್ (ಕ) 5 ತ (ಕ) 6 ದಲ್ಲಿದ್ದ (ಕ) 7 ನಿಬ್ಬ (ಕ) 8 ಡೆ (ಚ) 9 ದ್ದು (ಚ) 10 ದೊಳಗೆ (ಚ) 11 ಕೃಪೆಯೊಳಗೆ (ಚ) 12 ಪ್ಪ (ಚ) 13 ತೆ(ಕ) 14 ನಾಗಭೂಷಣಭಕ್ತ (ಚ) 15 ಬಿದ್ದ(ಕ) 16 ತವೀಶ್ವರಂ (ಚ) 17 ಕಾ (ಚ) 18 ಬಿದ್ದ (ಕ) 19 ದರುಶ(ಚ) 20 ಬಿದ್ದ(ಕ) 21 ತ್ತಿರಲಂದು (ಕ) 22 ದು ನಂದೀಶ ನಲಿದಾ (ಕ) 23 ನಾಗಿ (ಕ)

* ಕಿನ್ನರರ ಸುರರ ಕಿಂಪುರುಷರಂ ತೊಲಗೆನುತ। ಪನ್ನಗರು ಗರುಡ ಗಂಧರ್ವರಂ ತೊಲಗೆನುತ | ಉರವಣಿಸದಿರಿ ಹರಿಯಜರು ನಿಲ್ಲಿ ಬಂಡೆಸಗೆ | ನೆರೆದ ದೇವರ್ಕಳುಂ ತೊಲತೊಲಗಿ ಬಂದೆಸೆಗೆ (ಚ)

ಸ್ಸೈಗೆಡೆದು ಹರಚರಣವನಪ್ಪಿ[1]ಕೊಂಡಿ[1]ರಲು
ಕೈಗಿೞಿದು ನಯನಾಶ್ರು ಕೋಡಿವರಿವು[2]ತ್ತಿರಲು
ನೋಡು ನಂದೀಶ ನಿಚ್ಚಟ ಶರಣ[3]ನಿರ್ಪು[3]ದಂ
ನೋಡು ಕಿಟ್ಟು[4]ಬ್ಬಟೆಯ ನೇಮದಿಂ ಬಾ[5]ಳ್ದು[5]ದಂ.
ದಿಟ್ಟವಾರಿಯ ನೇಮದಿಂ ಬಾಳ್ದರಿಂತುಂಟೆ
ದಿಟ್ಟ[6]ಗಂ ಅಡ್ಡ[6]ಬಂದ[7]ರ[7] ಕೊಂದರಿಂತುಂಟೆ
ಅವರಿ[8]ರ್ವ[9]ರು[8]ಮ[9]ನಿಲ್ಲಿ ಒಲಿದು ತಂದವರುಂಟೆ
ಅವನಿಗತಿಚೋದ್ಯಮಂ ಮಾಡಿ ಬಂದವರುಂಟೆ
ಎಂದು ಕೊಂಡಾಡು[10]ತುಂ[10] ಗಣಕುಲಕೆ ತೋಱುತುಂ
ಇಂದುಮುಖಿ ಪಾರ್ವತಿಗೆ ಬೆಸಸಿ ಕೊಂಡಾಡುತುಂ
ಸುರಗಿಯ ಚವುಂಡರಾ[11]ಯಂ[11]ಗೆ ಗಣಪದವಿತ್ತು
ಹರಭಕ್ತರಿ[12]ರ್ವ[12]ರಿಗೆ ಸಾಲೋಕ್ಯಮುಮನಿತ್ತು
ಶಶಿಧರಂ ವಿಷಧರಂ ಕುಸುಮಶರ ಸಂಹರಂ
ಅಸಮಾಕ್ಷನಕ್ಷಯಂ ದಕ್ಷಮಖ[13]ಮದ[13]ಹರಂ
ತಾಂಡವಾಡಂಬರಾಂಬ[14]ರವಸನ ವಿಭ್ರಮಂ[14]
ದಂಡ[15]ಧ[15]ರ [16]ತ್ರಿಪುರಹರ[16] ಸಂಹರಣ [17]ವಿಕ್ರಮಂ[17]
ವಿಕ್ರಮ ಧನಂಜಯ ತಪೋವೇಷ ಶೋಷಣಂ
ಶಕ್ರಾದಿ ಸುರನಿಕರ ಕಾರುಣ್ಯ[18]ಪೋ[18]ಷಣಂ
ಸುರನರೋರಗನಿಕರ [19]ಕಲ್ಪತರುವೊ[19]ಪ್ಪಿದಂ
ಹರಿಪುರಂದರ ವಿರಿಂಚಿಗಳರಸನೊಪ್ಪಿದಂ
ಸಂಪಾಮುಖಾಂಬುಜ ಸಹಸ್ರಕರನೊಪ್ಪಿದಂ
[20]ಪಂಪಾಪುರಾಧಿಪ ವಿರೂಪಾಕ್ಷ[20]ನೊಪ್ಪಿದಂ

ಕಂ॥ ಪರಮಗುರು ಪರಮಶಾಂತಂ
ಸುರಗಿಯ [21]ಚಾವುಂ[21]ಡರಾಯನವನೆಂದೆನಗಾ
ದರದಿಂ ಕರುಣಿಸುತಿ[22]ಕ್ಕನ
ವರತಂ[22] ಶಶಿವೌಳಿ ಹಂಪೆಯ ವಿರೂಪಾಕ್ಷಂ

---

[1] ಕೊಳುತಿ (ಚ) [2] ಳಿಗೆ ತವಕ ಉರವಣಿಸಿ ಪೊಣ್ಮು (ಚ) [3] ನಿಂಡು (ಚ) [4] ಟನಿ (ಚ) [5] ಳ್ವು (ಚ) [6] ಗಡ್ಡಂ (ಚ) [7] ರಂ (ಚ) [8] ಬ್ಬ (ಕ) [9] ವ (ಕ) [10] ತಂ (ಚ) [11] ಜಂ (ಚ) [12] ಬ್ಬ (ಕ) [13] ಪುರ (ಕ) [14] ರಂ ಶರಣಶ್ರುತ ವಿಗ್ರಹಂ (ಚ) [15] ಹ (ಚ) [16] ಸಂಹನನ (ಕ) [17] ವಿಗ್ರಹಂ (ಚ) [18] ಶೋ (ಚ) [19] ಮಾಲಾಂಗನೊ (ಕ) [20] ಹಂಪೆಯ ವಿರೂಪಾಕ್ಷನನವರತ (ಚ) [21] ಚಾಂ (ಚ) [22] ಕೆF ಸ್ಮರಹರ (ಚ)

## ೨. ಮುಸುಟೆಯ ಚೌಡಯ್ಯಗಳ ರಗಳೆ

ಕಂದ॥ ಬಿಸುಗ[1]ಣ್ಣಂ[1] ಕೆಂಜೆಡೆ[2]ಯಂ[2]
ದೆ[3]ಸೆವುಡುಗೆಯ ನೀಱ ಹಂಪೆಯ [4]ವಿರೂಪಾಕ್ಷಂ[4]
ವಸುಧಾತಳದೊ[5]ಳ್ ಮೆ[5]ಱೆಶಿದಂ
ಮುಸುಟೆಯ [6]ಚಾವುಂಡರಾಯನಂ ನಲವಿಂದಂ[6]

ರಗಳೆ॥ ಒಡಗಣ ದಿಶಾಭಾಗದೊಳಗೊಂದು ಶಿವಪುರಂ
ನೃಡಭಕ್ತಿ ನೆಲೆಗೊಂಡು ಮೆಱೆವುದು ಸವಿಸ್ತರಂ
ಮುಸುಟೆಯೆಂ[7]ಬುದು[7] ಪುರದ ಪೆಸರದಱೊಳೊಪ್ಪುವಂ
ಮುಸುಟೆಯ [8]ಚವುಂ[8]ಡರಾಯಂ ಸುಖನನಪ್ಪುವಂ
ಆತನ ಶಿವಾಚಾರಮಂ ಪೇಳಲೆನ್ನಳವೆ
ನೂತನಂ ಧರಣಿತಳಕೆ ಬಣ್ಣಿಸಲೆನ್ನಳವೆ
ಶರಣಾರ್ಥಿ ಎನುತ ಹುಟ್ಟಿದನನುಮು ಜಂಗಮಕೆ
ಶರಣಾರ್ಥಿ ಎನುತ ಬೆಳೆದಂ ಪೊಸತು ಕಲಿಯುಗಕೆ
ಜಂಗಮದ ಪದರೇಣುವಿಡಿದು ತನುವಾದಂತೆ
ಜಂಗಮದ ಪ್ರೇಮವೇ ಜೀವ ತಾನಾದಂತೆ
ಜಂಗಮ ಸ್ನೇಹವೇ ಜಿಹ್ವಾಗ್ರವಾದಂತೆ
ಜಂಗಮದ ನೋಟವೇ ತನಗೆ ಕಣ್ಣಾದಂತೆ
ಜಂಗಮ ಸ್ತೋತ್ರವೇ [9]ತನಗೆ ಕಿವಿಯಾದಂತೆ[9]
ಜಂಗಮದ [10][ಜಿಹ್ವೆಯೇ][10] ತನಗೆ ಬಾಯಾದಂತೆ
ಜಂಗಮದ ನಾಸಿಕ [11]ತನಗೆ[11] ಘ್ರಾಣವಾದಂತೆ
ಜಂಗಮಸ್ಪರ್ಶನವೆ ತನಗೆ ಸೋಂಕಾದಂತೆ*

---

1 ಣ್ಣಂ (ಚ) 2 ಯಿಂ (ಚ) 3 ಸವುಸುಪತಿಯಿಂದ ಮೆರವ (ಚ) 4 ರಾಯ (ಚ) 5 ಳೆಮ (ಚ) 6 ಚಾಂಡರಾಯನಂ ಧಾರುಣಿಯೊಳ್ (ಚ) 7 ಬಾ (ಚ) 8 ಚಾಂ (ಚ) 9 ಜಿಹ್ವೆಯಾಗಿರ್ದಂತೆ (ಕ) 10 ಜಿಂಹ್ವೆ (ಚ) 11 ವೆ (ಕ)

* ಈ ಭಾಗ 'ಕ' ಪ್ರತಿಯಲ್ಲಿಲ್ಲ.

ಜಂಗಮುಕ್ಕೆಂದಪಯುಪಂ ಪಿಡಿದು ನಡೆದಂತೆ
ಲಿಂಗಜಂಗಮಭಕ್ತನೊಪ್ಪು[1]ವಂ[1] ತಾನಿಂತೆ
ಕನಸಿನೊಳ್ ಮನಸಿನೊಳ್ ಶರಣಾರ್ಥಿಯೆಂ[2]ದೆನುತೆ[2]
ನೆನಹಿನೊಳ್ ನಿಷ್ಠೆ[3]ಯೊಳ್[3] ಶರಣಾರ್ಥಿಯೆಂ[4]ದೆನುತೆ[4]
ನಡೆವಲ್ಲಿ ನುಡಿವಲ್ಲಿ ಶರಣಾರ್ಥಿಯೆಂದೆನುತೆ
ಕೊಡುವಲ್ಲಿ ಕೊಂಬಲ್ಲಿ ಶರಣಾರ್ಥಿಯೆಂದೆನುತೆ
ಕಂಡಪಂ ಕಾಣದೊಡೆ ಶರಣಾರ್ಥಿಯೆಂದೆನುತೆ
ತಂಡತಂಡದ ನುಡಿ[5]ಗೆ[5] ಶರಣಾರ್ಥಿಯೆಂದೆನು[6][ತೆ][6]
ಇರುಳುವುಂ ಪಗಲುವುಂ ಶರಣಾರ್ಥಿಯೆಂದೆನು[6][ತೆ][6]
[7]ಮರುಳುಗೊಂಡಂತೊಗೆದು ಶರಣಾರ್ಥಿಯೆಂದೆನುತೆ[7]
ನುಡಿಯೊಳಗೆ ಪಂಚಾಕ್ಷರಿಯ ಪದಂ ನೆಲಸಿತ್ತು
[8]ನಡೆ[8]ಯೊಳಗೆ ಮೃಡನ ರೂಪ[9]ಕ್ಕೆ[9]ಜಂ ನೆಲಸಿತ್ತು
ಶಿವನ [10]ಸಾಮರ್ಥ್ಯವಾ ನುಡಿಯೊಳಗೆ ಬೆಳೆಯಿತ್ತು[10]
ಭವನ ತೇಜಂ [11]ನಿತ್ಯ ಕರಣದೊಳು ತಳೆಯಿತ್ತು[11]
ಇಂತೆ[12]ದೆಸೆದಿರುತ್ತಮಿ[12]ರುತಿಪ್ಪೊಂದು ದಿವಸದೊಳು
ಕಂತುವೈರಿಯ ಮಜ್ಜನಕ್ಕೆ ಸಂತೋಷದೊಳು
ಮುಸುಟಿಯು ಚವುಂಡರಾಯಂ ಹರುಷದಿಂ ಬಂದು
ಎಸೆವ ನಿರ್ಮಳ ಸರೋವರ ಮಧ್ಯದೊಳ್ ನಿಂದು
ಹೊಂಗೊಡಂಗಳೊಳಗ್ಘವಣೆಯನೊಲವಿಂ ತೀವಿ
ಸಿಂಗರಿಸಿ ಬಾಸಣಿಸಿ ಕಡುನೇಹದಿಂದೋವಿ
ಹೂವಿನ ಕರಂಡಗೆಯ ಕಂಬಿಯೊಳ್ ಕೈಗೊಳಿಸಿ
ಭಾವಕದೊಳಡಿಯಿಟ್ಟು ಬರುತಮಿರೆ [13]ಸಡ[13]ಗರಿಸಿ
ಬಂದೂರ ಬಾಗಿಲಂ ಭರದಿಂದ ಪೊಗುವಲ್ಲಿ
ಸಂದಣಿಸಿ ಬರುತಿರ್ದುದೊಂದು ಕೇಳಿಕೆಯಲ್ಲಿ
ಮುರ[14]ಜವಾ[14]ವುಜದ ಗಿಜಿಗಟೆಯ ನಾದಂಗಳಿಂ
ಶರಣ ಸಂತಾನದ ಶಿವಪ್ರಘೋಷಂಗಳಿಂ

---

[1] ತುಂ (ಕ) [2] ದೆಂಬ (ಚ) [3] ಯಿ (ಕ) [4] ದೆಂಬ (ಚ) [5] ಯ (ಕ) [6]
[7] ಶರಣು ಶರಣಾರ್ಥಿ ಶರಣಾರ್ಥಿಯೆಂದೆನುತಿಪ್ಪ (ಕ) [8] ನುಡಿ (ಕ) [9] ಳ್ಕ (ಕ) [10]
ಮೇಲಸಯಪದಿ ನೆಲಸಿತ್ತು (ಚ) [11] ಸತ್ಯವಚನದೊಳ್ ನೆಲಸಿತ್ತು (ಕ) [12] ತು ಸೇರ
[13] ಸಿಂ (ಚ) [14] ಜೆಯಾ (ಕ)

ಭ[1]ಕ್ತ[1]ತತಿ ಹೊತ್ತು [2]ವಿಸ್ತ[2]ರಿಸಿದ ವಿಮಾನದಿಂ
ಭ[3]ಕ್ತ[3]ನಂ ರಜತಗಿರಿಗೈ[4]ದಿಸುವ ಚಂದದಿಂ[4]
ಬರುತಿರೆ ವಿಮಾನದೊಳಗಣ ಭಕ್ತನಂ ಕಂಡು
ಅ[5]ರರ[5]ರೆ ಮುಸುಟೆಯ ಚ[6]ವುಂಡರಾಯಂ[6] ಕಂಡು
ಶರಣಾರ್ಥಿ ದೇವ ಶರ[7]ಣೆನುತ[7] ಕೈಯಂ ಮುಗಿ[8]ಯೆ[8]
ಶರಣು ಗಿರಿಜಾವರನೆ ಕರುಣಿಸೆನು[9]ತಂ ನಲಿಯೆ[9]
ನೆರೆದ ಶಿವಭಕ್ತರೆಲ್ಲರು ನೋಡಿ ಬೆಱಗಾ[10]ಗೆ[10]
ನಿರುತ ನಿರ್ಮಳ ಚಿತ್ತನಂ [11]ಸಾರೆವರೆ ಹೋಗೆ[11]
ಹೋಗೆ ನಾ ಶಿವಭಕ್ತನಿಳಿ[12]ವನ[12]ಲ್ಲದೊಡಳಿವೆ
ಬೇಗಲಿಳಿ[13]ಪು[13]ವು[14]ದಿ[14]ಳಿಪದಿರಲೀಗ ನಾನಳಿವೆ
ಎಂದಾಗ ಚಂದ್ರಮೌಳಿಗೆ ಬಿನ್ನಪಂಗೆಯ್ಯೆ
ಸಂದ ಚಿತ್ತದೊಳಂ ಸದಾಶಿವಂ ದಯೆಗೆಯ್ಯೆ
ಭರದಿಂದ [15]ಸುರಗಿಯಂ ತೆಗೆದು ಭೋಂಕನೆ ನಡೆಯೆ[15]
ತರತರದ ಕಟ್ಟುಗಳು [16]ಚಿಟಿಚಿಟಿಲೆನಲು[16] ಪಱಿಯೆ
ಶಿವ [17]ನಮಸ್ತೆ[17]ನುತಾ ವಿಮಾನದಿಂದಿಳಿದುಬರೆ
ಶಿವಭಕ್ತರೆಲ್ಲರುಂ ಕೌತುಕಮೆನುತ್ತ[18]ಮಿ[18]ರೆ
ಶರಣರೆ[19]ಲ್ಲು[19]ಘೆ ಚಾಂಗು ಬೊಲ್ಲೆನುತೆ ಹೊಗಳುತಿರೆ
[20]ಪರಿಜನಂ ಪುರಜನಂ[20] ನೆರೆದು ಕೊಂಡಾಡುತಿರೆ
ಇದು ನೇಮವಿದು ನೇಮವೆಂದನಾ ನಿ[21]ಚ್ಚ[21]ಟಂ
ಸದಮಳಂ ಮುಸುಟೆಯ ಚವುಂಡರಾ[22]ಯಂ[22] ದಿಟಂ
[23]ಕೈಕೊಂಡನಾ ನೇಮವಂ ಜಗಂ[23] ಬೆಱಗಾಗೆ
ಏಕನಿಷ್ಠೆಗೆ ಭಕ್ತರೆ[24]ಲ್ಲರು[24] ಹರುಷಿತರಾಗೆ
ಅಂದಿಂ[25]ದೆ[25] ಕಂಡ ಜಂಗಮವ[26]ನೊಲಿದೆ[26]ತ್ತುತಂ
ಇಂದುಧರನಂಘ್ರಿಯಂ ಭಕ್ತಿಯಿಂ [27]ಮುಟ್ಟುತಂ[27]

---

1 ಕತ (ಕ) 2 ನಿತ್ತ (ಚ) 3 ಕತ (ಕ) 4 ಯ್ದಿದ ವಿಮಾನದಿಂ (ಕ) 5 ರ (ಚ) 6 ವುಡನಿದಿರೊಳು ತಾ (ಚ) 7 ಣೆಂದು (ಚ) 8 ದು (ಚ) 9 ತುಂ ಬಿಗಿದು (ಚ) 10 ಗಿ (ಚ) 11 ಸಾರು ನೀವು ತೊಲಗಿ (ಚ) 12 ದೊಡ (ಚ) 13 ಸು (ಚ) 14 ದುವಿ (ಕ) 15 ಚೀತನಂ ತೀವೆ ಮೈಕೈವೊಗೆಯೆ (ಕ) 16 ಚಟಚಟಲೆನುತ (ಕ) 17 ಮಸ್ತುಂಯೆ (ಕ) 18 ಲಿ (ಚ) 19 ಲ್ಲರು (ಕ) 20 ಪುರಜನಂ ಪರಿಜನಂ (ಕ) 21 ತ್ಥ (ಚ) 22 ಜಂ (ಕ) 23 ಲೋಕವೆಲ್ಲಂ ನೇಮವಂ ಕಂಡು (ಕ) 24 ಲ್ಲ (ಚ) 25 ಪ ಸಲೆ (ಚ) 26 ನೆ (ಚ) 27 ದೆತ್ತುತುಂ (ಕ)

ಇರುತೊಂದುದಿನವಗ್ಲ[ಪ]ಣಿ ಹೂಗಳಂ ಕೊಂಡು
ಬರು[1]ತಿರೆ[1] ವೃಷ[2]ಭ[2] ದೀರ್ಘ ನಿಪ್ರೆ[3]ಯೊಳಿರಲ್[3] ಕಂಡು
ಬಸವನ ಶರೀರಕ್ಕೆ ನೋವುಂಟೆ [4]ಸಾ[4]ವುಂಟೆ
ಬಸವನಿಂತಿರ್ಪುದಂ ಸೈರಿಸುವರಿ[5]ನ್ನುಂ[5]ಟೆ
ಎಂದು ಬಸವಯ್ಯ [6]ಬಸವೇಶ[6] ಏಳೆಂದೆನಲು
ಮುಂದೆ ಮುರಿದೆದ್ದು ದಿಟ್ಟಿಸಿ ನೋಡಿ [7]ಭೋಂಕೆನಲು[7]
ಮುಸುಟಿಯ [8]ಚವುಂ[8]ಡರಾಯನ ಮೇಲೆ ಮೊಗವಿಟ್ಟು
[9]ಬಸವನಿರೆ ಭಕ್ತರೆಲ್ಲಂ[9] ಕೌತುಕಂಬಟ್ಟು
ಕೊಂಡಾಡಿ ಕುಣಿದಾಡಿ ಗುಡಿಗಟ್ಟಿ [10]ಮೆಱೆವುತಿರೆ[10]
ಮುಂಡಾಡಿ ತೆಗೆದಪ್ಪಿ ಬಿಗಿಯ[11]ಪ್ಪಿ ಒಪ್ಪುತಿರೆ[11]
ನೇಮದೊಳ[12]ಗಿಂತಿದುವೆ ನೇಮವೆನಗಿನ್ನೆಂದು[12]
ಸೋಮಧರನಣುಗನಾನಂದದಿಂ ನಡೆತಂದು
ಬಸವನಂ ಜಂಗಮುವನೆತ್ತು[13]ತಂತಿ[13]ರಲಲ್ಲಿ
ಪಸುಫೆಯೊ[14]ಳು[14] ಶಿವ[15]ಭಕ್ತಿ[15] ಪ[16]ಲ್ಲವಿ[16]ಸುತಿರಲಲ್ಲಿ
ಪಲಕೆಲವು ದಿನ[17]ಸವಿಂತೀ[17] ತೆಱಿದೊಳೊಪ್ಪು[18]ತಂ[18]
[19]ನಲಿನ[19]ಲಿದು [20]ಶಂಕರನ[20] ಭಕ್ತಿಯೊ[21]ಳು ಹೆಚ್ಚುತಂ[21]
ಲಿಂಗನಂ ನೋಡು[22]ತಂ[22] ಜಂಗಮಕೆ ಮಾಡು[22]ತಂ[22]
ಸಂಗಸುಖ ಸಾರಾಯ[23]ರಸ[23]ದೊಳೋಲಾಡು[24]ತಂ[24]
ಇರುತೊಂದು ದಿ[25]ನವಗ್ಲವಣಿ ಹೂಗಳಂ ಕೊಂಡು[25]
ಬರು[26]ತಿರಲ್[26] ಮುಂದೆ ಮಕ್ಕಳುಗಳೊ[27]ಬ್ಬ[27]ಳಿಗೊಂಡು
ಚಿಟ್ಟುಮುರಿ[28]ವರಿದಾಡೆ ತಮ್ಮೊಳುಂ ನೆರೆ[28]ನೆರೆದು
ಇಟ್ಟಣಿಸುತುಂ ತಮ್ಮೊ[29]ಳೋರ್ರೋರ್ವರಂ ಕರೆದು[29]
ಎರೆಗಳಂ [30]ಹಂಚಿ[30]ಕೊಂಡಿತ್ತಂಡವೊಂದಾಗಿ
ಹರುಷದಿಂ ನಿಂದೆರಡು ಗೊತ್ತಿಂಗೆ ನೆಲೆಯಾಗಿ

---

1 ತಂ (ಕ) 2 ಭಂ (ಚ) 3 ಯಿಂದಿರೆ (ಚ) 4 ಲಯ (ಕ) 5 ತುಂ (ಚ) 6
(ಕ) 7 ನಿಂದಿರಲು (ಚ 8 ಚಾಂ (ಚ) 9 ಪೊಸಲೀಶೆಗೆಲ್ಲ ಭಕ್ತರು (ಚ) 10 ನಲಿ
11 ಪ್ಪಲೊಪ್ಪುತಂ (ಚ) 12 ಗಿನ್ನಿದೇನೇಮುವೆನಗೆಂದೆನಲು (ಚ) 13 ತ್ತುವಿ (ಕ) 1
15 ಭಕ್ತಿಕೀರ್ತಿ (ಕ) 16 ಲೈ (ಚ) 17 ಸಂಗಳೀ (ಚ) 18 ತಿರೆ (ಚ) 19 ನ (ಚ
ಣರ (ಚ) 21 ಳಗೆ ಪೆಚ್ಚುತ್ತಮಿರೆ (ಚ) 22 ತುಂ (ಕ) 23 ಸುಖ (ಚ) 24 ತುಂ (ಕ
ಶರಣರ ವಿವಾಹಕ್ಕೆಂದು (ಚ) 26 ತಮಿರೆ (ಚ) 27 ಬ್ಬರ್ (ಕ) 28 ಯುಂ ನಾಡೆ ತನ್ನೊ
29 ಳೀರ್ವರುಂ ಸಲೆ ನಿಂದು (ಚ) 30 ಹಚ್ಚಿ (ಚ)

ಅಲ್ಲಿ ಕುಱುಹಿನ [1]ದಿಣ್ಣೆಯದು ನಿಮಗೆ[1] ಗೊತ್ತೆಂಬು
[2]ಅಲ್ಲಿ ಗೂಳಿಯ ಕಲ್ಲಿದೆಮಗೆ ನೆಱೆ[2]ಗೊತ್ತೆಂದು
ಮಾತಾಡೆ ಕೇಳ್ದನಪ್ರತಿಮ [3]ಶರಣಂ[3] ನೋಡ
ನೂತನಂ ಮುಸುಟಿಯ ಚವುಂಡರಾಯಂ ನೋಡ
ಎಲೆ ಮಕ್ಕಳಿರ [4]ಕಲ್ಲ ಹೆಸರದೆಂತೆಂತೆನಲು[4]
ನಲಿನಲಿದು ಹೇಳತೊಡಗಿದರಲ್ಲಿ ಭೋಂಕೆನಲು*
ಹಿಂದೆ ಕೆಲವುಂಬರಿಸ ಸಂದೊಂದು ಗೂಳಿಯಂ
ತಂದು ನಿಕ್ಷೇಪಿಸಿ[5]ದರಲ್ಲಿ[5]ಯಾ ಗೂಳಿಯಂ
ಅಂದಿಂದ [6]ಇಂತು[6] ಗೂಳಿಯ [7]ಕಲ್ಲಿದೆಂ[7]ದೆನಲು
ಸಂದಣಿಸಿ ಮಕ್ಕಳೆಲ್ಲಂ ತಪ್ಪದೆಂದೆನಲು
ಕೇಳ್ದಲ್ಲಿ ಮುಸುಟಿಯ ಚವುಂಡರಾಯಂ ನೊಂದು
ತಾಳ್ದು ಕಡುಗೋಪದಿಂ ಕ್ಷಣದೊಳೆತ್ತುವೆನೆಂದು
ನಿಮ[8]ಗಲ್ಲ[8] ತಾನೆಮ[9]ಗೆ[9] ಗೊ[10]ತ್ತೆಂದೆನುತೆ[10]
ನಿಮಗಲ್ಲ ಮಕ್ಕಳಿರ [11]ಮಾಣಿರೇ ನೀವೆನುತೆ[11]
[12]ಕಂಬಿಯಂ ನಿರ್ಮಳಸ್ಥಾನದೊಳ್ ಸ್ಥಿರಿಸಿ
ಇಂಬರಿವ ಭಕ್ತನತಿಬೀರದೊಳ್ ಸಡಗರಿಸಿ[12]
ಎತ್ತುವೆಂ ಬಸವನಂ ಭುವನವೆಲ್ಲಂ ನೋಡೆ
ಎತ್ತದಿರ್ದಡೆ ಮುಡಿವೆನಿಂದುಧರನಲ್ಲಾಡೆ
ಎನು[13]ತ[13] ಕಿಗ್ಗಟ್ಟನಲಗಂ ಸಪ್ರನುಚ್ಚುತಂ
ತೊನೆತೊನೆದು ಕೈ[14]ಯೊಡ್ಡಿ[14] ಜಂಘೆಗಳ [15]ಜಾ[15]ಱುತಂ

---

[1] ಗೂಳಿಯಾಲವದು (ಚ) [2] ಇಲ್ಲಿಕಟ್ಟೆಯ ಕಲ್ಲ ಆಲವದು (ಚ) [3] ಭಕ್ತಂ (ಚ) [4] ಬಸವನಾಲವೆಂದೆಂತೆನಲು (ಚ) [5] ರಿ (ಕ) [6] ವಿಂತು (ಕ) [7] ಆಲವೆಂ (ಚ) [8] ಗೆ (ಚ) [9] ಗಂ (ಚ) [10] ತ್ತೆನಲು (ಚ) [11] ಎನ್ನತ್ತ ನೋಡೆನಲು(ಚ) [12] ಅಂಬಿಕಾಪತಿಯೆ ಕರುಣಿಸು ಕರುಣಿಸೆಂದೆನಲು ನಂಬಿ ಭಕ್ತರಪಾದಕೆರಗಿ ಭಾಷೆಯ ಕೊಡಲು (ಚ) [13] ತೆ (ಕ) [14] ಮಾಡಿ (ಕ) [15] ಗಳಂಬೀ (ಚ)

* ಅನಂತರ 'ಚ' ಪ್ರತಿಯಲ್ಲಿನ ಹೆಚ್ಚಿನ ಭಾಗ :

ಪುಸಿಯಲ್ಲ ಈ ಮಾತು ನಂಬದಿರ್ದಡೆ ನೋಡು
ಒಸರ್ವ ಪಾಲುಂ ರಕ್ತಪಣ್ಣು ಮಾಂಸದೊಳಿಹುದು
ಎರಡು ಗೂಳಿಗಳುಮೇಳ್ದಿನ ಬಿಡದೆ ಕಾದುತಿರೆ
ನೆರೆದ ಜನರೆಲ್ಲರುಂ ಚೋದ್ಯವೆಂದೆನುತಮಿರೆ
ಕೆಲೆವುತ್ತ ಮಲೆವುತ್ತ ಮೈಗಾಯದಿಂ ನೊಂದು
ನಲಿವಡಗಿ ಮುಡಿದೊಂದು ಗೂಳಿ ಭಯದಿಂದ
ಮುತ್ತಯ್ಯ ಹೆತ್ತಯ್ಯನಿಗೆ ಹೇಳೆ ತಮ್ಮಯ್ಯ
ಅರ್ತಿಯಿಂ ಕೇಳ್ದು ನಮ್ಮೆಲ್ಲರಿಗೆ ಪೇಳ್ದಯ್ಯ
ಹಿಂದೆ ಹಳಗಾಲದಿಂದಂ ಮುಡಿದ ಗೂಳಿಯಂ

ನಡದ ಗೂಳಿಯು [1]ಕಲ್ಲ[1] ಹೆಸರ ಹತ್ತಿರೆ ಬಂದು
ಕಡುನಿಷ್ಠೆವಂತನುರವಣಿಸುತುಬುಬುಬು[2]ಯೆಂ[2]ದು
[3]ಒದಱಿ[3] [4]ಘರ್ಜಿಸಿ ಘೂರ್ಮೆಯಿಕ್ಕುತಂ[4] ಪುಟನೆಗೆದು
ಅದಿರ[5]ದ[5]ಬ್ಬರಿಸೆ ಶರ್ವಂ ನಡುಗೆ ಬೊಬ್ಬಿ[6]ಱಿದು[6]
ಎಲೆ[7]ಲೆಲೆಲೆ[7] ಬಸವ ಪೊಱಮಡು ಪೊಱಮಡೆನ್ನಾಣೆ
ಎಲೆಲೆ ಇನ್ನಿರ್ದಡೆ [8][ಮ][8]ಹೇಶ್ವರ[9]ರ ಹಿರಿಯಾ[9]ಣೆ
ಎಂಬ ನುಡಿ[10]ಯಂ ಕೇ[10]ಳ್ದು ನೆಲದೊ[11]ಳಗೆ[11] ಘುಡುಘುಡಿಸಿ
ಇಂಬು[12]ಗೊಡಲುಬ್ಬಿ[12]ಯದಿರ್ದಲ್ಲಾಡೆ ಹೊಡಕರಿಸಿ
ವಸುಧೆ ಬಿ[13]ಕ್ಕ[13]ನೆ ಬಿರಿಯೆ ಪರಸಮಯಿಗಳ್ ಸರಿಯೆ
ಕುಸಿದನ್ಯದೈವಂಗಳೆಲ್ಲ ಜಗ್ಗನೆ ಜರಿಯೆ
ನೆಲನದಿರೆ [14]ಬ್ರಹ್ಮಾಂಡವಲುಗಾಡೆ[14] ಘುಡುಘುಡಿಸಿ
* ಕೆಲೆವುತಂ ನೆಲಂ ಮೊಳಗಿದಂತಿರೆ ಠಣತ್ಕರಿಸಿ
ಕೆಲೆದ ದನಿಗಾ ನೆಲಂ ಬಾಯ್ದೆಱೆದು ಬಟ್ಟೆಗುಡೆ
ನಲಿವುತಂತಿಂತೊಲೆದು ಪೊಱಮಡಲು ಚಿತ್ತವಿಡೆ*
ಸ್ವರ್ಗಮೋಕ್ಷಾಂ[15]ಘ್ರಿಪದ ಮೊಳೆಗಳುಜ್ವಳಿಪಂ[15]ತೆ
ಭರ್ಗವಾಹನದ ತುದಿ[16]ಗೋಡು[16] ತೋಱಲ್ಕಂತೆ
ನೋಡಲ್ ಸ್ವಯಂಭುಲಿಂಗದ ತೆಱ[17]ದಿ ಹಿಣಿ[17]ಲೊಗೆಯೆ
ನೋಡಲ್ ಸಕಲ ಧರ್ಮಮುಖವಾದ ಮುಖವೊಗೆಯೆ
ಮಲೆವುತಂ ಕೆಲೆವುತಂ ಕೆಕ್ಕ[18]ಳಿ[18]ಸಿ ನೋಡುತಂ
[19]ಒಲೆವುತಂ ನಲಿವುತಂ[19] ಕೆಲನನಾರೈವುತಂ
ಬಸವನಮ್ಮಮ್ಮ ಭೂಮಿಯನೊಡೆದು ಮೂಡಿ[20]ತ್ತು[20]
ಮುಸುಟೆಯ [21]ಚವುಂಡ[21]ರಾಯನ ಮನಂಗೂಡಿ[22]ತ್ತು[22]
ಹರಕೀರ್ತಿ ಬಯಸಿ ಬಸವನ [23]ರೂಹು[23]ಗೊಂಡುದೊ
ಶರಣಸಂಗದ ಪುಣ್ಯಫಲ [24]ಮೂರ್ತಿಯಾದುದೊ[24]

---

1 ಮರದ (ಚ) 2 ಬೆಂ (ಕ) 3 ಬಗೆದು (ಚ) 4 ಕುಬುಜಿಸಿ ಕೂರ್ಮವಿಕ್ಕುತಂ (ಕ) 5 ಲ (ಕ) 6 ಟ್ಟು (ಕ) 7 ಲೆ (ಚ) 8 ಮಾ (ಕಚ) 9 ಪಿರಿಯರಾ (ಕ) 10 ಗೇ (ಚ) 11 ಳ್ (ಚ) 12 ಗೊಂಡುಬರ್ಬಿ (ಚ) 13 ಬ್ಬ (ಚ) 14 ಗುರುತರ ಘ್ರಾಣದಿಂ (ಕ) 15 ಗನೆಯ ಕುಚದಗ್ರವೆಂಬಂ (ಚ) 16 ಗೊಂಭು (ಚ) 17 ದವೊ (ಕ) 18 ಱ (ಚ) 19 ಅಲೆವುತಂ ಕೆಲವುತಂ (ಚ) 20 ತೋ (ಚ) 21 ಚಾಂ (ಚ) 22 ತೋ (ಚ) 23 ಮೂರ್ತಿ (ಕ) 24 ವಳವಿಗೊಂಡುದೊ (ಕ)

*ಈ ಭಾಗಕ್ಕೆ ಬದಲಾಗಿ 'ಚ' ಪ್ರತಿಯಲ್ಲಿ ಬರುವ ಸಾಲುಗಳು :

ಕೆಲದ ಬೇರ್ಗಳು ಸಿಡಿದು ಮುರನೆದ್ದು ವೋಸರಿಸಿ
ಕೆಲದೆದ್ದು ನಿಲ್ಲೆ ನೆಲಂ ಬಾಯ್ದೆರದು ಪೊರಮಡಲು
ಕೆಲವುತಂತಿಂತೊಲದು ಪೊರಮಡಲು ನಿಂದಿರಲು

ಆಲೋಕ[1]ದಮೃತಕ್ಕೆ ಕೋಡುಮೂಡಿರ್ದುದೋ[1]
ನೀಲಕಂಠನ [2]ಬಿಪ್ಪ ತೊಲಗಿರೂಪಾದುದೋ[2]
ಶಿವಭಕ್ತಿ ಗೋವಂ [3]ಪಯನು[3] ಪಾಡ ಬಂದುದೋ
ಶಿವಭಕ್ತನಂ ಮೆಱೆಯಲೆಂ[4]ದೆದ್ದು ನಿಂದುದೋ[4]
ಎಂಬಂತೆ ನಿಂದಿರ್ದ ವೃಷಭರಾಜನನಂದು
ಇಂಬಱೆ[5]ದು[5] ಮುಸುಟೆಯ [6]ಚವ್ವಂ[6]ಪರಾ[7]ಯಂ[7] ಬಂದು
ಆಹಾಹ ಪುಣ್ಯಪುರುಷನ ಸುಖಾಸನ[8]ಕೆ[8] ಜಯ
ಓಹೋ ಸದಾಶಿವನ ಮೂರ್ತಿಗ[9]ನಿ[9]ಮಿಷನೆ ಜಯ
ಎನ್ನ ಶಿವಭಕ್ತರೆಲ್ಲರ ಪುಣ್ಯಮೂರ್ತಿ ಜಯ
ಚೆನ್ನವೃಷಭೇಂದ್ರ ಸಕ[10]ಲೋತ್ಪತ್ತಿ[10]ಪರನೆ ಜಯ
ಊರ್ಜಿತ ಶಿವಾಚಾರದುನ್ನತಧ್ವಜನೆ ಜಯ
ನಿರ್ಜಿತೇಂದ್ರಿ[11]ಯನೆ[11] ಶೈವಾಗಮಪ್ರಜನೆ ಜಯ
ನಿರ್ಮಳನೆ ಕರ್ಮರಹಿತನೆ ಧರ್ಮಮೂರ್ತಿ ಜಯ
[12]ಧರ್ಮಸ್ವರೂಪ ಯಮಹರನ ಹೊತ್ತಿಹನೆ[12] ಜಯ
ಎಂದು [13]ಹೊ[13]ಗಳುತ್ತ ಹೊಮ್ಮುತ್ತ ಹಿಗ್ಗುತ್ತಗಿದು
ಹೆಂದವಾನಂದದಿಂದಂದು ಹೊಗಳು[14]ತ್ತ[14]ಗಿದು
ಬಸವನಂ ಕೊರಳಪ್ಪಿ [15]ಕೊಂಡಾಡಿ ಬಿಡದಪ್ಪಿ[15]
ಎಸೆವ ಸಂತೋಷದಿಂ [16]ಮತ್ತಮತ್ತ[16]ಮರ್ದಪ್ಪಿ
*ತಿರುಗಿದನು ಬಸವೇಶನೊಡನೆ ಭಕ್ತರುವೆರಸಿ
ಬರವರಲು ಮುಂದೊಂದು ಕಾಂತಾರದೊಳು ನೆಲಸಿ
ಇಟ್ಟೆಯಾ ಮರದ ಪಣ್ ಕಣ್ಗೆ ಚೆಲ್ವಾಗಿರಲು
ನೆಟ್ಟ ನೋಡುತ್ತ ಶರಣರು ಸಂತಸಂಬಡಲು
ಎಮ್ಮ ದೇವಂಗೆ ತಂದುಣಬಡಿಸು ನೀವೆನಲು*
ಕರ್ಮರಹಿತಂ ಮರಕೆ ಸುರಗಿಯಂ ಸೇರಿಸಲು

1 ಕಮ್ಮಮ್ಮ ಪುಣ್ಯವಂ ಕೊಡುವುದೊ (ಚ) 2 ಧರ್ಮರೂಪು ತಾನಾದುದೋ (ಚ) 3 ಹೈಯ್ನಂ (ಚ) 4 ಪು ನಿಂದಿರ್ದುದೊ (ಚ) 5 ವ (ಕ) 6 ಚಾ (ಚ) 7 ಜಂ (ಕ) 8 ವೆ (ಕ) 9 ನು (ಕ) 10 ಳುತ್ಪತ್ಯ (ಚ) 11 ಯ (ಕ) 12 ಶರ್ಮಾವರಣ ಹರನ ಹೊತ್ತಿರ್ಪ ಪಾರ (ಕ) 13 ಪೊ (ಚ) 14 ತಲ (ಚ) 15 ಬಸವನಂ ನಲಿದಪ್ಪಿ (ಕ) 16 ದಂಬಿಪದೆಯ (ಚ)

* ಈ ಭಾಗ 'ಕ' ದಲ್ಲಿಲ್ಲ.

†ಅಮೃತಮಯಫಲವಾದುದಾ ನಿಮಿಷದೊಳು ನೋಡೆ
ತಮತಮಗೆ ಶರಣರೆಲ್ಲಂ ಕೊಂಡು ನಲಿದಾಡೆ
ಲಿಂಗಪ್ರಸಾದಮಂ ಕೈಕೊಂಡು ಬರುತಿರಲು
ಮಂಗಳಮಯನ ಶರಣರೆಲ್ಲರುಂ ನಡೆತರಲು
ಮುಂದೊಂದು ಪೆರ್ದೊಱೆಯು ಪರಿದು ಭೋರ್ಗರೆವುತಿರೆ
ಅಂದು ಚೌಂಡರಾಯಂ ಸಂತಸವ[ನೆಱೆವುತಿರೆ]
ಎಲೆ ಜಲಧಿ ನಿಲ್ಲೆಂದು ಸುರಗಿಯಂ ಝಳಪಿಸುತ
ನಲಿದು ಪೊಯ್ಯಲು ನೀರು ಎರಡಾದುದೆಂದೆನುತ
ನವಭಂಗಮುಂತಥೋಗಮನದಿಂ ಪರಿವಂತೆ
ಭುವನದೊಳು ಊರ್ಧ್ವರೇತನ ಕೂಡುವೆಂಬಂತೆ
ಆಕಾಶಗಂಗೆಯಂ ನೋಡಲ್ಕೆ ಪೋದುದೆನೆ
ಭೂಕಾಂತೆ ಜಲರಾಶಿಯಳೆವಳತೆಗೊಲಿದುದೆನೆ
ಎಂಬಂತೆ ನೀರೆಲ್ಲ ಒಂದು ದೆಸೆಯೊಳು ನಿಲಲು
ತ್ರ್ಯಂಬಕನ ಭಕ್ತರುಂ ಹರಪೂಜೆಗೆಂದಿರಲು
ಪುಷ್ಪಮಂ ಪತ್ರೆಯಂ ತಿಱಿತಂದು ಪೂಜಿಪರು
ಒಪ್ಪವಷ್ಟಾಂಗ ಪೂಜೆಯನೊಲಿದು ಮಾಡುವರು
ಪಾಱುಗುಪ್ಪೆಗಳನೊಲಿದಾಡುತಿರ್ಪರು ಕೆಲರು
ಅಲ್ಲಿ ಪೆರ್ದೊಱೆಯೊಳಗೆ ಏಳುದಿನಮಂ ಕಳೆದು
ಸಲ್ಲೀಲೆಯಿಂದ ನಡೆದರು ಹರುಷಮಂ ತಳೆದು
ನದಿಯಾಚೆ ನಡೆದು ಮೆಲ್ಲನೆ ಹೋಗು ನೀನೆಂದು
ಮದನಹರಭಕ್ತರಿಗೆ ತೆಱಹುಗೊಟ್ಟರುಯೆಂದು
ಅಲ್ಲಿಂದ ಬಂದು ಶಿವಪುರಿಗೆ ಒಲವಿಂ ಕೂಡಿ
ಎಲ್ಲರುಂ ಬಂದು ಶರಣಂಗೆ ಮದುವೆಯ ಮಾಡಿ
ತಿರುಗಿದರು ಮದುಮಕ್ಕಳಂ ರಥದವೊಳಗಿರಿಸಿ
†ಪರಿಪರಿಯ ವಾದ್ಯದೊಳು ಕೇಳಿಕೆಗಳಂವೆರಸಿ
ಬಂದೂರ ಪೊಕ್ಕು ಸಂತೋಷದಿಂದಿರ್ಪಾಗ†
ಳಂದು ಜೈನರು ನೆರೆದು ಕುಹಕಮಂ ನೆನೆದಾಗ
ತೊಡೆಯ ಸುಟ್ಟಾ ಗೂಳಿಯಂ ಸಾಯಲೀಸ ಗಡ
ಬಡ ತಮ್ಮಡಿಯು ಅಳಿದ ಮಾತ ತಾಂ ಕೇಳ ಗಡ

---

† ಈ ಭಾಗ (ಕ)ದಲ್ಲಿಲ್ಲ.

ನೋಡುವೆವು ತನ್ನ ನಿಷ್ಠೆಯ ಭಕ್ತಿ ಕಾರಣವ(?)
ರೂಢಿಯೊಳು ಪೊಸತೆನಿಪ ದೃಢಭಕ್ತಿ ಮಹಿಮನಂ
ಎನುತಾಗ ಗೋಣಿಯೊಳು ಪುರುಷರೂಪಂ ಹೊಲಿದು
ಮಿನುಗುವಾ ರುದ್ರಾಕ್ಷಿ ಹಸ್ತಕಂಠದಿ ತಳೆದು
ಭಸಿತಮಂ ಸರ್ವಾಂಗದೊಳು ಪೂಸಿ ರಂಜಿಸುತ
ಎಸೆವಾ ವಿಮಾನದೊಳು ಮಡಗಿ ಕಾಳ್ಗಿಡೆವುತಂ
ಊರ ಹೊಱಗಣ ಪಾಳುದೇಗುಲದಿ ಸತ್ತವನ
ಆರುವುಂ ಎತ್ತಲೊಲ್ಲದೆ ನಾಱುತಿರ್ದವನ
ಕೊಂಡುಬನ್ನಿರೆ ಚೌಡರಾಯನಿಹ ಕೇರಿಗೆನೆ
ಕಂಡು ಕೇಳುತ್ತ ಪೊಸತೀ ರೂಪು ಚೋದ್ಯವೆನೆ
ಈವೇಷಮಂ ನಿಜದ ರೂಪಾಗಿ ತೋಱುವೆಂ
ಭೂವಳಯದೊಳಗೆ ಪರಸಮಯಿಗಳ ಭಂಗಿಸುವೆ
ಎಂದು ಶರಣರನು ಬಲವಂದು ಶಂಕರಗೆಱಗಿ
ಅಂದು ಸುರಗಿಯ ಪಿಡಿದು ಝಳಪಿಸುತಲಿದಿರಾಗಿ
ಭಕ್ತಾನುಕಂಪಿಯೇ ಭಕ್ತದೇಹಿಕದೇವ
ನಿತ್ಯನೇ ಸತ್ಯನೇಯೆಂದು ನಿಜದೊಳು ಕರೆವ
ಮಾತಿನೊಳು ಚೈತನ್ಯವೇಱುತ್ತ ಶರಣಂಗೆ
ಭೂತಕಾಯದು ಕದಱುವೋಡಿತ್ತು ಜಗದೊಳಗೆ*
ಇರೆ ಪುಷ್ಪವೃಷ್ಟಿಗಳ್ ಸುರಿದವಾತನ ಮೇಲೆ
ಪರಿಪರಿಯ ದುಂದುಭಿಸ್ವರ ಉಣ್ಮಿದವು ಮೇಲೆ
ಆಗಳೈತಂದುದು ವಿಮಾನವಾಕಾಶದಿಂ
ರಾಗವಿಮ್ಮಡಿಸಿ ಬಂದುದು ಮನೋವೇಗದಿಂ
ಬಂದ ಪುಷ್ಪಕದೊಳಗೆ [1]ನಿಂದಂ ಬಸವ ಸಹಿತಂ[1]
[2]ಅಂ[2]ದಲ್ಲಿ ಮುಸುಟಿಯ ಚವುಂಡರಾಯಂ ಸಹಿ[3]ತೆ[3]
ಏಱಿ [4]ಗಗನ[4]ಕ್ಕೆ ನೆಗೆದುದು ದೇವಗಣಕು[5]ಲ[ಂ][5]
ಮಿಾಱಿ ಬೆಱಗಾಗಿ ನೋ[6]ಡುತ್ತಿರ್ದುದೀ ನೆ[6]ಲಂ

---

[1] ಪಡೆದ ಶರಣಂ ಸಹಿತಂ (ಚ) [2] ಬಂ (ಕ) [3] ತ (ಚ) [4] ಸಿ ನಭ (ಚ) [5] ಲ (ಕಚ) [6] ಡಲು ರುದ್ರಗಣಕು (ಚ)

* ಈ ಭಾಗ (ಕ)ದಲ್ಲಿಲ್ಲ.

[1]ನೋಡೆ ನಡೆತರುತೆ[1] ರಜತಾದ್ರಿಯಂ [2]ಪುಗಲಂದು
ನೋಡಿ ಶಿವನೆಯ್ದಿ ಬೆಱಗಾಗುತಿರೆ ಪರಿತಂದು[2]
ಮುಸುಟೆಯ ಚವುಂಡರಾ[3]ಯಂ[3] ಹರನ ಚರಣಕ್ಕೆ
ಎಸೆವ ಹರಿನಯನದಿಂದೊಪ್ಪುವ ಪದಾಬ್ಜಕ್ಕೆ
ವೇದಂಗಳಱಸಿ ಕಾಣದ ಚರಣಯುಗಳಕ್ಕೆ
ವಾದಿಂಗತರ್ಕ್ಯ[4]ವೆನಿಸುವ[4] ಪಾದಯು[5]ಗಳ[5]ಕ್ಕೆ
ಕೈಯೆತ್ತಿ [6]ಕೈಯೆತ್ತಿ ಪೊಡಮಟ್ಟು ಪೊಡಮಟ್ಟು[6]
[7]ಮೆಯ್ಯಿಕ್ಕಿ ಮೆಯ್ಯಿಕ್ಕಿ ನೆಱೆ ಸಂತಸಂಬಟ್ಟು[7]
ಇರೆ ಸದಾಶಿವನೆತ್ತಿ ತ[8]ಕ್ಕೈ[8]ಸಿ ಮುಂಡಾಡಿ
ಶರಣ ಸಂತತಿಗೆ ನೆಱೆ ಬೆಸಸು[9]ತ್ತೆ[9] ಕೊಂಡಾಡಿ
ನೋ[10]ಡ[10] ನಂದೀಶ [11]ಜಂಗಮವ[11]ನೆತ್ತಿ[12]ದ[12]ರುಂಟೆ
ನೋ[13]ಡ ನಿಕ್ಷೇಪಗೂಳಿಯನೆತ್ತಿದವರುಂಟೆ[13]*
ಎಂದು [14]ಪುಳಕಿಸುತೆ[14] ಮೂರ್ಧ್ನಿಘ್ರಾಣ[15]ಮಂ[15] ಮಾಡಿ
ಬಂದ [16]ಬಸವನನಲ್ಲಿ ಸುರಭಿಗಳೊಡನೆ[16] ಕೂಡಿ
ಮುಸುಟೆಯ [17]ಚವುಂ[17]ಡರಾ[18]ಯಂ[18]ಗೆ ಗಣಪದವಿತ್ತು
ಹೊಸ [19]ಸಂತಸಂಗಳಂ[19] ಮನದ ಮೊನೆಯೊಳು ಹೊತ್ತು
ದೇವನೊಪ್ಪಿದನಮೃತಭಾವನಿಂತೊಪ್ಪಿದಂ
ಭಾವಜಶರೀರ ವನದಾವ[20]ಮುಖನೊ[20]ಪ್ಪಿದಂ
ಗಜದನುಜ ಚರ್ಮಧರ [21]ಅಜಹರಣ[21]ನೊಪ್ಪಿದಂ
ಭುಜಗಭೂಷಣನಮ[22]ಳ ಭುಜನಿಕರ[22]ನೊಪ್ಪಿದಂ
ಅಮ್ಮಮ್ಮ ಸಕಳಲೋಕೈಕಗುರುವೊಪ್ಪಿದಂ
ಎಮ್ಮ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

---

1 ನಡೆತಂದು (ಚ) 2 ಪೊಕ್ಕು ನಲಿವುತಂ ಕಡುಗಲಿಯನಲ್ಲಿ ಶಿವ ನೋಡಿ ಬೆಱಗಾಗುತಂ (ಚ) 3 ಜಂ (ಕ) 4 ವೆಂದೆನೆ (ಚ) 5 ಗ್ಮ (ಚ) 6 ನಿಂದು ಸಾಷ್ಟಾಂಗದಿಂ (ಚ) 7 ಬಾಯ್ದಣಿಯೆ ಪೊಗಳಿ ಸ್ತೋತ್ರಂಮಾಡಿ ಪೊಡಮಟ್ಟು (ಚ) 8 ಕ್ಕೈ (ಚ) 9 ತಂ (ಚ) 10 ಡು (ಚ) 11 ಬಸವನ (ಚ) 12 ದವ (ಚ) 13 ಡು ಇಟ್ಟಿಯ ಪಣ್ಣನಿತ್ತು ದಣಿಸಿದರುಂಟೆ (ಚ) 14 ತಕ್ಕೈಸಿ (ಚ) 15 ವಂ (ಚ) 16 ಶರಣಂಗೆ ಸಾಲೋಕ್ಯ ಪದದೊಳ್ (ಚ) 17 ಚಾಂ (ಚ) 18 ಜಂ (ಕ) 19 ಪರಿಯ ಸಂತಸವ (ಚ). 20 ನಿಂತೊ (ಚ) 21 ನಗಜೇಶ (ಚ) 22 ರವಂದ್ಯಪದ (ಚ)

*ಅನಂತರ ಚ ಪ್ರತಿಯಲ್ಲಿ ಬರುವ ಹೆಚ್ಚಿನ ಭಾಗಗಳು :

ಜಲಧಿ ಮೇರೆಯ ಮೀರಿ ಪರಿಯೆ ನಿಲಿಸಿದರುಂಟೆ

ಸಿಲೆ ಕೃತಕರೂಪ ಶರಣನ ಮಾಡಿದವರುಂಟೆ.

ಕಂದ || ಅಸಮಾಕ್ಷಂ ಕರುಣಂ ಮಿಗೆ
ಮುಸುಟೆಯ [1]ಚಾವು[1]ಡರಾ[2]ಯ[2]ನವನೆಂದೆನಗಂ[3]
ತೊಸೆದೀಗೆ[3] ಭಕ್ತಿ[4]ಯಂ ರಾ[4]
ಜಿಸುವಹಿಥರನೆಮ್ಮ ಹಂಪೆಯ ವಿರೂಪಾಕ್ಷಂ

[1] ಚಾಂ (ಚ) [2] ಜ (ಕ) [3] ಗೀವಸುಧೆಗೆ (ಚ) [4] ಯರಂ (ಚ)

## ೩. ತೆಲು[1]ಗು[1] ಜೊಮ್ಮ[2]ಯ್ಯಗಳ[2] ರಗಳೆ

ಕಂದ|| ಗಿರಿಜಾವಲ್ಲಭನಂಬರ
ಪುರಮಥನಂ ದೇವ ಹಂಪೆಯ ವಿರೂಪಾಕ್ಷಂ
ಕರುಣಂ ಮಿಗೆ ಮೆಱೆದಂ ಸಾ
ದರದಿಂದಂ ತೆ[3]ಲುಗ ಜೊಮ್ಮ[3] ತಂದೆಯನಿಳೆಯೊ[4]ಳ್[4]

ರಗಳೆ|| ಧರೆಗೆಸೆವ ಕಲ್ಯಾಣವೆಂಬ ಪಟ್ಟಣದೊಳಗೆ
ಹರಭಕ್ತನೊರ್ವನಿ[5]ರ್ಪಂ[5] ಭಕ್ತಿ ತೊಳತೊಳಗೆ
ನಾಮಂ [6]ತೆಲುಗ[6] ಜೊ[7]ಮ್ಮ[7]ತಂದೆಯೆಂದೊಪ್ಪಿರ[8]ಲ್[8]
ಭೀಮನಾಥಂಗತಿಪ್ರೇಮ[9]ಕ[9]ರವಾಗಿರ[10]ಲ್[10]
ಮನ್ನೆಯಂ ಸಾಮಂತ ಪತಿಭಕ್ತಿಭೂಷಣಂ
ಅ[11]ನ್ನೆಯಂ[11] ಹೊದ್ದ[12]ಲಾ[12]ಱದ ಸುಖ ನಿ[13]ಷೇವ[13]ಣಂ
ಏಕನಿಷ್ಠಂ ಶಿವನನಲ್ಲದೊ[14]ಲ್ಲ[14]ದ ಮಾನಿ
ಲೌಕಿಕವನೆಳ್ಳನಿತವನುಸರಿಸದಭಿಮಾನಿ
ಸತ್ಯ[15]ನ[15]ಚಲಂ ಮಹೋತ್ಸಾಹಿ ಕಲಿ [16]ನಿಷ್ಕಾಮಿ[16]
ನಿತ್ಯಲಿಂಗಾರ್ಚನಾನಿರತನಭವಪ್ರೇಮಿ
ನಿಂದೆಯಂ ಸೈ[17]ರಿಸದನಿತ್ಯ[17]ತರ ಗುರುಮೂರ್ತಿ
ಇಂದುಧರನ ಪ್ರತಾಪಾರಂಭ[18]ಣದ[18] ಕೀರ್ತಿ
ಉರಿಯಂತೆ ಸಿಡಿಲಂತೆ ಶಿವದೂಷಕಾವಳಿಗೆ
ಸಿರಿಯಂತೆ ಸುಖದಂತೆ ಹರನ ಶರಣಾವಳಿಗೆ
ಭವಿಗಳಂ ಪು[19]ಳು[19]ವಿಂದೆ ಕಷ್ಟಮಾಗಿಯೆ ಕಂಡು
ಶಿವನ ಭಕ್ತರ ಬಂಧುಬಳಗ[20]ವಾಗಿಯೆ[20] ಕಂಡು

---

1 ಗ (ಕ) 2 ಣ್ಣನ (ಕ) 3 ಲುಂಗ ಜೊಮ್ಮ (ಕ) 4 ಳೂ (ಕ) 5 ಪ್ಪಂ (ಕ) 6 ತನಗೆ (ಚಪ) 7 ಮ್ಮ (ಕ) 8 ಲು (ಕ) 9 ತ (ಕ) 10 ಲ್ರು (ಕ) 11 ನ್ಯಾಯ (ಕ) 12 ಬಾ. (ಚ) 13 ವೇಷ (ಚಪ) 14 ಲ್ದ (ಚ) 15 ವ (ಕ) 16 ನಿಃ ಕಾಮಿ (ಕ) 17 ರದನಿಂದ್ಯ (ಕ) 18 ವರ (ಚಪ) 19 ಳ (ಕ) 20 ಮೆಂದೇ (ಚಪ)

ಇಂತಿರ[1]ಲ್[1] ಭೀಮನಾಥಂ ಕನಸಿನೊ[2]ಳ್[2] ಬಂದು
ಸಂತತಂ ಮಿಗೆ ಜಂಗಮಾಕಾರ[3]ದೊಳ್[3] ನಿಂದು
ಎಲೆ ಮಗನೆ ಜೊಮ್ಮಯ್ಯ ನಿನಗೊಂದನಱುಪುವೆಂ
ನಲವಿಂದ ಸೂಕ್ಷ್ಮಧರ್ಮವನೊಲಿದು ತಿಳುಪುವೆಂ
ಈ ಪಟ್ಟಣದ ಕೆಲದ ಹತ್ತುಯೋಜನದೊಳಗೆ
ಶಾಪಹತರಾಗಿ ಮೃಗವಾಗಿ ಕಾನನದೊಳಗೆ
ಕಾರಣಿಕ ಋಷಿಯರಿರ್ದಪರವರ[4]ನ[4]ಟ್ಟುವುದು
ಆರೈದು ಮೃಗದ ಜನನದ ಬೇಂಟೆಯಾಡುವುದು
ಮಾಯೆಯಂ ಕಳೆದು ಕೈಲಾಸಕ್ಕೆ ಕಳುಪುವುದು
ಕಾಯಮಂ ಹೊತ್ತಿರ್ಪ ಭಾರ[5]ಮುಮನಿ[5]ಳಿಪುವುದು
ಎಂದು ಕರುಣಿಸಿ ಹರಂ ಶಿವಲಿಂಗ[6]ದೊಳ್ [6]ಪುಗಲು
ಅಂದು ಜೊಮ್ಮಯ್ಯಂಗೆ ಪುಳಕಂಗ[7]ಳಗೆ[7]ಮಿಗಲು
ಎ[8]ಳ್ದ[8] ಕಣ್ದೆಱೆದು ಹರುಷಂಮಿಕ್ಕು ಹಾರೈಸಿ
ಬಾಳ್ದ ಶಿವನಂ ಕಂಡು ಸುಖದೊಳಗೆ [9]ಮೇಳೈ[9]ಸಿ
ಹರನಾಜ್ಞೆಯಿಂ ಮೃಗದ ಬೇಂಟೆಯಾಡುತ್ತಿರ್ದು
ಪರಮ ಋಷಿ[10]ಯರ[10] ಕರ್ಮಮಂ ಮಾಣಿಸುತ್ತಿರ್ದು
ಭಕ್ತರ್ಗೆ ಮಾಡಲಿಲ್ಲೆಂದುಮ್ಮಳಂ ಪುಟ್ಟೆ
ಯುಕ್ತಿಯಿಂ ಸೇವಿಕಾವೃತ್ತಿಗೆ ಮನಂ ಮುಟ್ಟೆ
ಬಂದು ಪೆರ್ಮಾಡಿರಾಯನ[ನ][11]ಕ್ಕ[11]ಱಂ ಕಂಡು
ಒಂದು ತಿಂಗಳಿಗೆ ಸಾವಿರಹೊನ್ನನೆಡೆಗೊಂಡು
ಶರಣರ್ಗೆ ಮಾಡುತಂ ಭಕ್ತಿಯಂ ಸೂಡುತಂ
ಪರಮಹರುಷಂ ಮಿಕ್ಕು ಸುಖದೊಳೋಲಾಡುತಂ
ಜೋಳವಾಳಿಯೊಳಿ[12]ರ್ಪ[12]ನಾ ಧರಾನಾಥಂಗೆ
ವೇಳೆವಾಳಿಯೊಳಿ[12]ರ್ಪ[12]ನಾ ಭೀಮನಾಥಂಗೆ
[13]ಹೆಮ್ಮಾ[13]ಡಿ ರಾಯಂಗೆ ಪೊ[14]ಡಮಡಂ[14] ಲೆಕ್ಕಿಸಂ
ಅಮ್ಮಮ್ಮ ಶಂಕರಧ್ಯಾನೈಕಮಾನಸಂ

---

[1] ಲು (ಕ) [2] ಳು (ಕ) [3] ದಿಂ (ಕ) [4] ಟ್ಟೊಗಿ (ಚ) [5] ಮಂ ಇ (ಚಪ) [6] ಳು ಪೊ (ಕ) [7] ಳ್ಮಿಗೆ (ಚ) ಳೊಳು (ಪ) [8] ದ್ದು (ಚ) [9] ಪ್ರೊನ್ಟೈ (ಚಪ) [10] ಗಳ (ಚಪ) [11] ಕ್ಕ (ಚಪ) [12] ಪ್ಪ (ಕ) [13] ಪೆರ್ಮಾ (ಕ) [14] ಡೆವಡಂ (ಕ) ಡಮುಡಲ್ (ಚ)

ಓಲೈಸಬಂದಪೆಂದುಂ ಮಱೆದು ಕುಳ್ಳಿರಂ
ಆಲೋಕಿ[1]ಸಂ[1] ದಿಟಂ ಕೈಕೊಳ್ಳನೊ[2]ಬ್ಬ[2]ರಂ
ಪುರುಷಸಿಂಹವನಾಳ್ವ ಮಾತಂಗಪತಿಯಂತೆ
ಅರಸ[3]ಪೆರ್ಮಾ[3]ಡಿರಾಯಂ ಭೀತಿಯಿಂದಿರುತೆ
ಪೋಗೆನಲ್ಕಮ್ಮ[4]ದವಸಂ[4] ನೋಡಿ ನಡುಗುವಂ
ಬೇಗದಿಂದಂ ಕರೆಯಿಸಲ್ಕಮ್ಮ[5]ದಂ[5]ಜುವಂ
ತನ್ನಿಚ್ಛೆಯೊಳ್ ಬಂದು ತನ್ನಿಚ್ಛೆಯೊಳ್ ಪೋಗಿ
ಮನ್ನಣೆಯ ಶಿವನ ತೇಜದ ಕಣಿಯ ಕರುವಾಗಿ
ಇರಲಿತ್ತ ಪೆರ್ಮಾಡಿರಾಯನೊ[6]ಲುಮೆ[6]ಯ ಕಾಂತೆ
ಪರಮಶಿವಲಿಂಗಾರ್ಚನಾನಿರತೆ ಗು[7]ಣಿ ಶಾಂ[7]ತೆ
ತನಗೆ ಲಕುಮಾದೇವಿಯೆಂಬ ಪೆಸರೊಪ್ಪಿರ[8]ಲ್[8]
ಮನಸಿಜಾರಿಯನಕ್ಕಱಿಂದ[9]ರ್ಚಿ[9]ಸುತ್ತಿರ[10]ಲ್[10]
ಜೊಮ್ಮಯ್ಯನೇಕನಿಷ್ಠೆಯ [11]ಛಲದ[11] ಬಲುಪುಮಂ
ಜೊಮ್ಮಣ್ಣನೆಸೆವ ಶಿವಭಕ್ತಿಯುತ್ಸಾಹಮಂ
ಪುರಹರನ ಪರಮ ಪ್ರ[12]ತಾಪ[12]ದುರವಣೆಯುಮಂ
ಹರನ ತೇಜಂ ನೆಲಸಿ ನಿಂದ ಸಂದಣಿಯುಮಂ
ಕೇಳ್ದು ಸಂತೋಷದಿಂ ಪರಮಹರುಷಂಗಳಂ
ತಾಳ್ದು ಹೊಸಹೊಸಪರಿಯ ವಸ್ತ್ರಸಂತತಿಗಳಂ
ಚಂದನಂ ಕರ್ಪೂರ[13]ವಗಿಲು[13]ಧೂಪಂಗಳಂ
ಮಂಪೈಸಿ ಕಂಪಿಡುವ ಸಾದುಕಸ್ತುರಿಗಳಂ
ಅಂದಂದು ಬಂದೆಸೆವ ಪೊಚ್ಚಪೊಸಪೂಗಳಂ
ಇಂದುಧರನಣುಗಂಗೆ ಪರಿ[14]ಪರಿಯ ಪೂ[14]ಗಳಂ
ಕ[15]ಳು[15]ಪುತಿರೆ ಕೈಕೊಂಡು ಜೊಮ್ಮಣ್ಣನ[16]ರ್ತಿ[16]ಯಿಂ
ಪುಳಕಿಸು[17]ತೆ[17] ಪೊಡಮಡುತೆ ಶಿವಭಕ್ತಿಗೊ[18]ಲ್ಮೆ[18]ಯಿಂ
ಶಿವಸೋದರದ ತೆಱದಿ ಬಂಧುಕೃತ್ಯದೊಳಿರ[19]ಲ್[19]

---

1 ಸದೆ (ಕ) 2 ಬರ್ (ಕ) 3 ಹೆಮ್ಮಾ (ಕ) 4 ನವರಂ (ಕಚ) 5 ಸಂ (ಕಚ) 6 ಲ್ಮೆ (ಕ) 7 ಣಕಾಂ (ಕ) 8 ಲು (ಕ) 9 ಲರ್ಚಿ (ಕ) 10 ಲು (ಕ) 11 ನಚಲ (ಚಪ) 12 ಭಾವ (ಕ) 13 ವಗುರು (ಕ) ನಗಿಲು (ಚ) 14 ಯ ಹೊಸ ಹೂ (ಕ) 15 ಳ (ಪ) 16 ಳ್ತಿ (ಚಪ) 17 ತ (ಕಚ 18 ಲುಮೆ (ಕ) 19 ಲು (ಕಚ)

ಶಿವನನರ್ಚಿಸು[1]ತ್ತೆ[1] ಕಲ[2]ವುಂ[2]ದಿವಸವಿರುತಿರ[3]ಲ್[3]
[4]ಇರ್ದು[4] ಜೊಮ್ಮಯ್ಯಗಳೊಂದು ದಿನ ಉದಯದೊ[5]ಳ್[5]
ಸಾರ್ದು [6]ಮುಖ[6]ಪ್ರಕ್ಷಾಲನಂ ಮಾಡಿ [7]ಹರುಷದೊಳ್[7]
ಆಗಮಸ್ಥಾ[8]ನಂಗಳೊ[8]ಳು ಭಸಿತ[9]ಮುಮನಿ[9]ಟ್ಟು
ರಾಗದಿಂ ರುದ್ರಾಕ್ಷಿಗಳನಳವಡಲ್ ತೊಟ್ಟು
ಸೆಜ್ಜೆಯರಮನೆಯೊಳೊಪ್ಪುವ ಭೀಮನಾಥನಂ
ಸಜ್ಜನಪ್ರೇಮಿ ತನ್ನಯ ಪ್ರಾಣನಾಥನಂ
ಬಾರಯ್ಯ ಬಾರೆನ್ನ ಭಕ್ತಜನ[10]ದುನ್ನತಿಯೆ[10]
ಬಾರಯ್ಯ ಬಾರರಸ ಬಾರೆನ್ನ ಗತಿಮತಿಯೆ
ಬಾರ ನಂಟೆದರೊಲವೆ ಬಾರ ಶರಣರ ಬಲವೆ
ಬಾರ ಪುಣ್ಯದ ಫಲವೆ ಬಾರ ಮುಕ್ತಿಯ ನಿಲವೆ
ಎಂ[11]ದೆಂದು[11] ಬೋಳೈಸಿ ಕರೆದು ಬಿಜಯಂ[12]ಗೈಸಿ[12]
ಮಂಪೈಪ ಹರುಷದಿಂದೊಲಿದೊಲಿದು ಹಾರೈಸಿ
ಚಂದದಿಂ ಪಾಡುತಂ ಮಜ್ಜನಕ್ಕೆಱೆದೆಱೆದು
ಚಂದನವನಿತ್ತಿತ್ತು ನೋಡಿ ಸುಖದೊಳ್ ನೆನೆದು
ಪುಳಕಿಸುತೆ ಸಿಂಹಾಸನಕ್ಕೆ ಬಿಜಯಂ[12]ಗೈಸಿ[12]
ಎಳಸುವಚ್ಚರಳ್ಗಳ ಸಿರಿಮುಡಿಗೆ[13] ಕೈಕೊಳಿಸಿ[13]
ನವಧೂಪ ಧೂಮದಿಂದೊಸರ್ವ ಪರಿಮಳ[14]ವಿ[14]ತ್ತು
ನವಕಾಂತಿಗಳನೇಳಿಪಾರತಿಗಳಂ ಪ್ರೊ[15]ತ್ತು[15]
ಕಂಪಿಡುವ ವೀಳಯ[16]ವನಾರೋಗಿಸಲ್ ಕೊಟ್ಟು[16]
ಸೊಂಪೇಱು ಶಿವನೇಕನಿಷ್ಠೆಯಂ ಮುಂದಿಟ್ಟು
*ಪಾದೋದಕ ಪ್ರಸಾದದ ತಂಬುಲಂಗೊಂಡು
ಸಾದರಂ ಭೀಮನಾಥನ ಕೃಪೆಯ [17]ನಡೆಗೊಂಡು[17]

---

[1] ತ (ಕಚ) [2] ವು (ಕ) [3] ಲು (ಕಚ) [4] ಎದ್ದು (ಕ) [5] ಳು (ಕಚ) [6] ಮೊಗ (ಚಪ) [7] ನಿಳಯದೊಳು (ಕ) [8] ನದೊ (ಚ) [9] ಮಂ ತೀವಿ (ಚಪ) [10] ಬಂಧುವೇ (ಚ) [11] ದಿಂತು (ಕ) [12] ಗೆಯಿ (ಕ) [13] ಯೊಳಗೆ ಸೂಡಿ (ಚಪ) [14] ವನಿ (ಕಚ) [15] ತ್ತು ಕಂಪೆಸೆವ ಅಮೃತಾನ್ನದಾರೋಗಣೆಯನಿತ್ತು (ಪ) [16] ಮನಸಮನಯನಂಗಿತ್ತು (ಚಪ) [17] ಮುಂದಿಟ್ಟು (ಚಪ)

* ಈ ಸಾಲು ಚಪ ಪ್ರತಿಗಳಲ್ಲಿಲ್ಲ

ಇಂ[1][ತು][1]ದಯ ಸಮಯದೊಳು ನಿತ್ಯನೇಮಂ ಮಾಡಿ
ಕಂತುಮದಮರ್ದನನ ತೇಜಮಂ ನೆಱೆಸೂಡಿ
ಬಂದ ಭಕ್ತರ ಮನೋರಥನನೊಲಿದೀವುತಂ
ವಂದಿಸುತ್ತವರ ನಲವರಕೆಗಳನಾನುತಂ
ಮನೆಯಿಂದ ಪೊಱ[2]ಮಡುತ್ತ[2]ನ್ನತಾಸನವೇಱಿ
ಘನಮಹಿಮೆಯಂ ಮನದೊಳೆಡೆಗೊಂಡು ನಲವೇಱಿ
ನಡೆತರುತ್ತರನುನೆಯ ಮುಂದೆ ಭರದಿಂದಿಳಿದು
ವೃಡನೆ ಶರಣೆಂದೆನು[3]ತೆ[3] ಬಾಗಿ[4]ಲು[4]ಗಳಂ ಕಳೆದು
[5]ಪಡಿಯಱರು ತಮತಮಗೆ ನಿಂದು ಕೈಮುಗಿವುತಿರೆ[5]
ಎಡಬಲದ ರಾಜಪು[6]ತ್ರಾಳಿ[6] ನ[7]ಡ[7]ನಡುಗುತಿರೆ
ನಡೆತಂದನಾ ವಿಭೂತಿಯ ವೀರನಮ್ಮಮ್ಮ
ನಡೆತಂದನಲ್ಲಿ ಸುರಗಿಯ ಸುಭಟನಮ್ಮಮ್ಮ
ಬರುತಿರಲ್ ಮುಂದೊಂದು ಪಿರಿಯ ಮಾಳಿಗೆಯೊಳಗೆ
ಅರಸನಾ ವಿಷ್ಣುವಂ ಪೂಜಿಸುತ್ತಿರಲೊಳಗೆ
ಪೂಜೆಗೆ ನಿಂದಿರ್ದನಾ ಜೊಮ್ಮಣ್ಣನತಿಬಳಂ
ತಿಳಿಹಿಲ್ಲದಜ್ಞ[8]ಗ'ಲಿ ನೆಱೆಮನದ ನಿ[9]ಜ್ಞ[9]ಳಂ
ನಿಂದಿರಲ್ ಕೆಲ[10]ದೊಳೊ[10]ರ್ವಂ ಪುರಾಣಿಕನಲ್ಲಿ
ಸಂದಣಿಸಿ ವೈಷ್ಣವಪುರಾಣವೋದುತ್ತಲ್ಲಿ
ಕಟ್ಟಕಪುರಾಣ[11]ಮಂ[11] ದಿಟ್ಟತನದಿಂ ಪಿಡಿದು
ಕೆಟ್ಟ[12]ವಿಟ್ಟಿ[12]ಯ ಭಂಡನೆನಿಪ ಪಾರ್ವಂ [13]ನು[13]ಡಿದು
ಆಕಾಶಗಂಗೆ ಮುನ್ನುಳ್ಳುದು[14]ಮ[14]ನಟ[15]ಮು[15]ಟಿಸಿ
ಲೋಕಾಯತಂ ಹುಸಿಯನುಚ್ಚರಿಸಲಳವಡಿಸಿ
ವಿಷ್ಣುಪ[16]ದಿಯೆಂ[16]ದು ಗಗನದ ನಾಮವಲ್ಲಿರ್ದು
ವಿಷ್ಣುಪ[17]ದದಿಂದಾದಳೆಂಬುದನುವ[17]ಱಿದಿರ್ದು
ವಂಚಿಸಿ ಶಿವದ್ರೋಹಿ ಕಾಳ್ಗ[18]ಡಹುತಿರಲಲ್ಲಿ[18]
ಪಂಚಮುಖ ನಿಂದೆಯಂ ಮಾಡುತ್ತ[19]ಲಿರಲಲ್ಲಿ[19]

---

[1] ದು (ಕಚಪ) [2] ಮಟ್ಟುಲು (ಚಪ) [3] ತ (ಕಚ) [4] ಲ್ಗ (ಚಪ) [5] ಈ ಸಾಲು ಚ ಪ್ರತಿಯಲ್ಲಿ ಇಲ್ಲ [6] ತ್ರರು (ಚಪ) [7] ಡುಗು (ಪ) [8] ಕ (ಚಪ) [9] ಷ್ಟ (ಚಪ) [10] ದಶೊ (ಕ) [11] ವಂ (ಕ) [12] ಇಟ್ಟ (ಪ) [13] ಪಿ (ಚಪ) [14] ದ (ಚಪ) [15] ವ (ಚಪ) [16] ದವೆಂ (ಕಪ) [17] ದಿಯಾದಳೆಂಬರ್ಥಮುವನ (ಚಪ) [18] ಡೆವುತಿರುತಮಿರೆ (ಚಪ) [19] ಮಿರುತಮಿರೆ (ಚಪ)

ಕೇಳ್ದು ಜೊಮ್ಮಣ್ಣನೆಂತಂತದಿಂತಿನ್ನೊಮ್ಮೆ
ಆಳ್ದನೇ ಧರಿಯಿಸಿದನಿದೆನಾಡಲಾನೆಮ್ಮೆ
ಎಲೆಲೇ ಶಿವದ್ರೋಹಿ ಇಂತು ಪುಸಿ ನುಡಿವರೇ
ಎಲೆ ಪಾಪಿ ಪಾಪಿಪಾತಕ ಇಂತು ಬೊಗಳ್ವರೇ
ಎನುತಲಲಗಿಂ [1]ತೊ[1]ಪ್ಪಗಿಱಿದನಾ ದ್ರೋಹಿಯಂ
ತನುವಿನಿ[2]ಪ್ಪೈ[2]ಗಾಣೆ ನರಕರಂ ಬಾಹಿಯಂ
ಇಱಿದು ಭೋಂಕನೆ [3]ಸೆಳೆಯೆ ಬಿ[3]ದ್ದನಾ [4]ವಿದ್ರೋಹಿ[4]
ಒಱಗಿ [5]ನೆಲನಂ[5] ಕಾಱುತಿ[6]ರ್ದನಾ[6] ಕಡುಪಾಪಿ
ಬಲುಗ[7]ರಂ[7] ಹೊಡೆದಂತೆ ಬೆಱ್ತತನಾ ಪಾತಕಂ
ಹಲುಗಚ್ಚಿ ಹೆಣನಾದನಂ[8]ದಾ[8]ತ್ಮಘಾತಕಂ
ಅಂತಾ ಶಿವದ್ರೋಹಿಯಂ ತೀರ್ಚಿ ಪೊಱಮಟ್ಟು
ಕಂತುಮದಮರ್ದನನ ತೇಜಮಂ ಮುಂ[9]ದಿ[9]ಟ್ಟು
ಶಿವನಿಂತು ಕೇಳಿಸಿದನೇ ತನ್ನ ನಿಂದೆಯಂ
ಆವನದಲ್ಲಲ್ಲ ತ[10]ಪ್ಪಾಂ[10] ಬ[11]ಪ್ಪು[11]ದನ್ನೆಯಂ
ಎನು[12]ತೆ[12] ಘೂರ್ಮಿಸುತೆ ನಿಜನಿಳಯಕ್ಕೆ ನಡೆತಂದು
ಮನಸಿಜಾರಿಯ ಶರಣರಂ ಕರೆಯಿಸುತ್ತಂದು —
ಎಲ್ಲರಂ ನೆರಪಿ ಗಣತಿಂಥಿಣಿಗೆ ಮೈಯಿಕ್ಕಿ
ಎಲ್ಲಾ ಗಣಂಗಳಂ ಬಲಸಂದು ಮೈಯಿಕ್ಕಿ
ನಿಂದಿರ್ದು ಕೈಮುಗಿದು ಕಣ್ಣನೀರ್ ಕಡಲಾಗೆ
ಸಂದಣೆ[13]ಸಿ[13] ದುಃಖವಿಮ್ಮಡಿಸಿ ನೂರ್ಮಡಿಯಾಗೆ
ಬಿ[14]ನ್ನೈ[14]ಸಿದಂ ಜೊ[15]ಮ್ಮಿ[15]ತಂದೆಯನುರಾಗದಿಂ
ಬಿ[16]ನ್ನೈ[16]ಸಿದಂ ನಿಂದೆ[17]ಕೇ[17]ಳ್ದ ಕಡುಕೋಪದಿಂ
ಅವಧರಿಪುದಾನಿಂದು ಮಾಡಿದಪರಾಧಮಂ
ಕಿವಿಯಿಂದಲಿಂದಾದ ಗುರುತರ ನಿರೋಧಮಂ

---

[1] ಥೊ (ಚ) [2] ಮ್ಮೆ (ಕಚ) [3] ಸೀಳೆಯೆದ್ದ (ಕ) [4] ಚಿದ್ರೂಪಿ (ಕ) ವಿದ್ರೂಪಿ (ಪ) [5] ನೆತ್ತರವ (ಚಪ) [6] ತ್ತಿರ್ದ (ಚ) [7] ರವು (ಚಪ) [8] ತಾ (ಚ) [9] ತಿ (ಕ) [10] ಪ್ಪಂ (ಪ) [11] ಪ್ಪು (ಚಪ) [12] ತ (ಚ) [13] ಪ (ಕಚ) [14] ನ್ನಯಿ (ಕಚ) [15] ಮ್ಮ (ಕ) [16] ನ್ನಯಿ (ಕಚ) [17] ಗೇ (ಕ)

ಶಿವನಿಂದೆಯಂ ಕೇಳ್ದ ಪಾಪಿ[1]ಯೆನಗೆಂ[1]ತಯ್ಯ
ಭವಿಯನೋಲೈಸಿದಪರಾಧಿ[1]ಯೆನಗೆಂ[1]ತಯ್ಯ
ಹರನಿಂದೆ[2]ಯಂ ಕೇ[2]ಳಲೇಕೋಲಗಿಸಲೇಕೆ
ಹರಭಕ್ತರಲ್ಲದರ ಸಂಗ[3]ವೆನಗಿನ್ನೇಕೆ[3]
ನಿಂದಿಸಿದ ವಿಪ್ರನಂ ಕೊಂದೆ [4]ಎನಗೈದ[4]ದದು
ಇಂದವನ ವಂಶವಂ ನಟ್ಟು ಹರಗುವೆನೆಂದು
ಪೇಳಿರೇ ಇದಕೆ ಪರಿಹಾರಮಂ ಭಕ್ತರಿರ
[5]ಆಳಲೀಯದೆ ಬೇಗಲೆತ್ತಿರೇ ಭಕ್ತರಿರ[5]
ಎಂದು ಬಿನ್ನೈಸೆ ಭಕ್ತರ್ ಬಂದು ತಕ್ಕೈಸೆ
ಇಂದುಧರನಾಜ್ಞೆ ನಿಮಗುಂಟೆಂದು ಹಾರೈಸೆ
ಪಾಪಿಯಂ [6]ಪರಿಹರಿಸಿದ[6]ಪ್ರತಿಮ ಜೊಮ್ಮಯ್ಯ
ಪಾಪಕರನಂ ದ್ರೋಹಿಯಂ ತೀರ್ಚಿದೆನ್ಮಯ್ಯ
ಶಿವನಿಂ[7]ದೆ[7]ಗೆಯ್ದನಂ ಕೊಂದೆ [8]ನಿ[8]ನ್ನೇನಯ್ಯ
ಶಿವಭಕ್ತ ನಿನಗೊಂದು ತಪ್ಪುಂಟೆ ಜೊಮ್ಮಯ್ಯ
ಎಂದು ಬೆಸಸಿದ ಭಕ್ತರಾಜ್ಞೆಯಂ ಕೈಕೊಂಡು
ಬಂದ ಭಕ್ತಾಳಿಯಂ [9]ಭಾವ[9]ದಿಂ ಬಲಗೊಂಡು
ಗಣಪರ್ವದಿಂ ಕೇಳ್ದ ನಿಂದೆಯಂ ನೀಗುತಂ
ತಣಿವಂತೆ ಶರಣತತಿಗಿತ್ತು ಸುಖಿಯಾಗುತಂ
ಭೀಮನಾಥನೊಳಚಲಿತ ಪ್ರಸಾದಂಬಡೆದು
[10] ಸೋಮಧರನಂಘ್ರಿಯಂ ನಿಷ್ಠೆಯಿಂ ಬಲ್ಪಿಡಿದು [10]
ಶರಣ ಸಂಘಂ ತನಗೆ [11]ಪರಮ[11]ತು[12]ಷ್ಟಿ[12]ಯನೀಯೆ
ನಿರುಪಮಾನಂದಸುಖ [13]ಶರ[13]ಧಿತೆರೆ ಮೇಲ್ವಾಯೆ
[14]ಪನ್ನಗಾಭರಣನಣುಗಂ ಭಕ್ತಿಸುಖದೊಳಿರೆ[14]
ತನ್ನ ನಿಳಯದೊಳು ಜೊಮ್ಮ[15]ಯ್ಯ[15]ನೊಪ್ಪುತ್ತಮಿರೆ

---

[1] ಗೇನೆಂ (ಚಪ) [2] ಗೇ (ಚಪ) [3] ಡವದೇಕೆನಗೆ (ಚಪ) [4] ನನಗೆಯ್ದ (ಕ) [5] ಈ ಸಾಲು ಚಪ ಪ್ರತಿಗಳಲಿಲ್ಲ [6] ಹರಿಸಿದಾನ (ಚ) [7] ಡೆಯಂ (ಚ) [8] ಇ (ಕ) [9] ಭಯ (ಚಪ) [10] ಈ ಸಾಲು ಚಪ ಪ್ರತಿಗಳಲ್ಲಿಲ್ಲ [11] ಪಿರಿದು (ಚಪ) [12] ಟ್ವ (ಕ) [13] ಜಲ (ಚಪ) [14] ಈ ಸಾಲು ಚಪ ಪ್ರತಿಗಳಲ್ಲಿಲ್ಲ [15] ಣ್ಣ (ಕ)

# ದ್ವಿತೀಯ ಸ್ಥಲಂ

ಕಂದ|| ಹರನಿಂದೆಗೈದನಂ ಸಂ
ಹರಿಸಿ ಹವಜ್ಞಾನಿ ಹರನ ತೇ[1]ಜೋ[1]ಭರಣಂ
ಹರನಣುಗಂ ಹರ[2]ನಾಜ್ಞಾ
ಧರನಚ[2]ಲಂ ಜೊ[3]ಮ್ಮಿ[3] ತಂಡೆಯಿಪ್ಪವಸರದೊ[4]ಳ್[4]

ಗದ್ಯ|| ಹರನಿಂದೆಗೈದ ಶಿವದ್ರೋಹಿಯಂ ತೀರ್ಚಿ ಏಕನಿಷ್ಠೆ[5]ಯೆನಮರ್ಚಿ ಶಿವ ತೇಜಮಂ ನಿಮಿರ್ಚಿ ಪುಸಿಯ ನುಡಿಯಂ ಕೆಲಕೆ ಸಾರ್ಚಿ ಪಾಪವನೊಡರ್ಚಿ ಸೇವಕಾ ವೃತ್ತಿಯಂ ಬಿದಿರ್ಚಿ ಸದ್ಭಕ್ತಿಯನಲರ್ಚಿ[5] ಹರನೊಲಸಂ ತೊಡರ್ಚಿ ಪ[6]ರಿಚ್ಛೇದ[6]ವ್ಪ ನೊಡರ್ಚಿ ನಿರ್ಮಲಶೀಲಂ ಕರ್ಮವಿಧ್ವಂ[7]ಸನಂ[7] ಜೊ[8]ಮ್ಮಿ[8]ತಂಡೆ ಸತ್ಯ ಶರಣರ ನಡುವೆ ನಿತ್ಯನಾಗಿ[9]ರುತ್ತಿರಲಿತ್ತಲು[9]

ಪೆರ್ಮಾಡಿರಾಯಂ ಪುರಾಣಭಟ್ಟಂಗೆ ಮನಂ ಪಗೆಯಾದುದಂ ಪುಸಿನುಡಿ ವಿಷ[10]ಮಾ[10]ದುದಂ ಶಿವನಿಂದೆ[11]ಗೊಂಡುದನ[11]ಱಿಯದೆ ಪರಿಚಾರಕರಂ ಕರೆದು ಪಾರ್ವನೇಕೆ ಪುರಾಣಮಂ ಪೇಳದುಸುರದಿರ್ದಪನೆಂದು ಕೇಳಲೊರ್ವರುಂ ಪೇಳಲಮ್ಮದೆ ಸುಮ್ಮನಿರೆ ಮತ್ತೆ ಮ[12]ತ್ತಾ[12]ಕ್ರಮಿ[13]ಸಿ ಕೇಳೆ[13] ಜೊ[14]ಮ್ಮಿ[14]ತಂಡೆಗಳ್ ಕೊಂದರೆಂದು ಪೇಳಲಂಜಿ ಕೈಸ[15]ನ್ನೆಯಿಂ[15] ಬಾಯಿಸನ್ನೆಯಿಂ ತೋರ್ಪಾಗಳ್ ತಾನರ್ಚಿಸುವ ವಿಷ್ಣುಪ್ರತುಮೆ ತನ್ನಂ ದೆಸೆಯಿಂದಾದ ಶಿವನಿಂದೆಯಂ ಕೇಳ್ದು ಕಣ್ಣನೀರಿಕ್ಕುತಿರಲದಂ ಕಂ[16]ಡಿ[16]ದೇನುತ್ಪಾತವೆಂದ ರಸಂ ಭೋಂಕನೆ ಪೊಱಮಟ್ಟು ನಡೆತರು[17]ತ್ತೆ[17] ಮುಂದೆ ಕಾಳ್ಪುರಾಣವೊಂದೆಸೆ ತಾನೊಂದೆಸೆಯಾಗಿ ಕರು[18]ಳುಕಪ್ಪಸು ಕುಪ್ಪಳಿಸಿ ಸ[18]ತ್ತಿರ್ದ ನಿತ್ಯನರಕಿಯಂ ಕಂಡು ಮುಖದ ಕೈ[19]ಯಿಂ[19] ಮನದ ಕೌತುಕದಿಂ ಚಿತ್ತದ ನಿರೋಧದಿಂ ತಲೆದೂಗುತ್ತೆ ಪೆರ್ಮಾಡಿರಾಯಂ ಸಿಂಹಾಸನಾರೂಢನುಂ ಕೋ[20]ಪಾ[20]ರೂಢನುಮಾಗಿ ಶೋಭಿತಮಕುಟವರ್ಧನನು ಪರಿವೃತ ರಾಜಪುತ್ರ[21]ನುಂ[21] ಪರಿವೇಷ್ಟಿತ ಮಂತ್ರಿವರ್ಗ[22]ನುಂ ಆಶೀರ್ವಾದ[22] ವಿಪ್ರನಿಕಾಯನುಂ *ಪ್ರಣುತ ಪರಿಜನನುಂ ಸಚಿವ ಸಾಮಂತ ಮಂಡಳಿಕ ನಿಕರ ಕವಿ ಗಮಕ ವಾದಿ ವಾಗ್ಮಿವಾಹಕ

---

[1] ಜಾ (ಕ) [2] ನಸುಖಂ ಹರನಬ (ಕ) [3] ಮ್ಮ (ಕ) [4] ಳು (ಕ) [5] ಯಿಂ (ಚಪ) [6] ರೀಕ್ಷೆಯು (ಕ) [7] ಸಿ (ಚಪ) [8] ಮ್ಮ (ಕ) [9] ರಲಿತ್ತ (ಚಪ) [10] ವಾ (ಕ, [11] ಯೇಕೊಂದುದೆಂದ (ಚ, [12] ತ್ತೆ ಆ (ಕ) [13] ಸೆ (ಪ) [14] ಮ್ಮ (ಕ) [15] ಸ್ನೆ (ಚ) [16] ಡು ಇ (ಕ) [17] ತ (ಕ) [18] ಳ ಕರ್ಬಕುರ್ವಳಿಸು (ಚ) ಳು ಕುರ್ಪಳಿಸು (ಪ, [19] ಯಿಂ ಕಾಯ್ಪಂ ಕಂಗಳ ಕಾಂತಿಯಿಂ (ಚ) ಯಿಂ ಕಾಯ್ದಿ ಕಂಗಳ ಕಾಂತಿಯಂ (ಚಪ) [20] ಪಾಗ್ನಿ (ಕ) [21] ರುಂ (ಚಪ) [22] ಸುಮಾಗಿ ವಾದ (ಚಪ)

*–* ಈ ಭಾಗದಲ್ಲಿ ಚಪ ಪ್ರತಿಗಳಲ್ಲಿ ಬರುವ ಪಾಠಾಂತರಗಳು : ಪ್ರಣುತ ಕವಿಜನ ನಿಕಾಯನುಂ ಕೋಪಾಗ್ನಿ ಕಣಕಲಿತ ನಿಜೇಕ್ಷಣನುಮಾಗಿ ಪೆರ್ಮಾಡಿರಾಯಂ ಪಡಿಯಱಿಂ ಜೊಮ್ಮಯ್ಯನಂ ಮತ್ತೆ ಮತ್ತೆ ಕರೆಯ ಕಳುಪುತಿರಲಾತನ ಧರ್ಮಪತ್ನಿ ಶಿವಲಿಂಗಾರ್ಚನಾನಿರತೆ ಜಂಗಮ ಸ್ನೇಹಿ ನಿತ್ಯಭಕ್ತೆ (ಚ) ಪ್ರಣುತಕವಿಜನ ನಿಕಾಯನುಂ ಕೋಪಾಗ್ನಿ ಕಣಕಲಿತ ನಿಜೇಕ್ಷಣನುಮಾಗಿ ಪೆರ್ಮಾಡಿರಾಯಂ ಪಡಿಯಱಿಂ ಜೊಮ್ಮಯ್ಯನಂ ಮತ್ತೆ ಮತ್ತೆ ಕರೆಯೆ ಕಳಿಪುತಿರಲಿತ್ತಲಾತನ ಧರ್ಮಪತ್ನಿ ಶಿವಲಿಂಗಾರ್ಚನಾನಿರತೆ ಸತ್ಯಭಕ್ತೆ (ಪ)

ಗಜಾರೋಹಕ ಸರಸಗಾಯಕ ಭಾವಚಿತ್ರ ಪುಣ್ಯಪಾಠಕ ನನ್ಯನರ್ತಕ ನರ್ತಕಿ ಪ್ರಯುತಂ ಬಹಳ ಗೊಂದಣಸ್ಥಾನನಾಗಿ ಕೆಂಪಡರ್ದ ಕಂಗಳಿಂ ಕೆತ್ತುವ ಮಿಾಸೆಯಿಂ ಚಿತ್ತದ ಕ್ಷೋಭೆಯಿಂ ಮನದ ಕಡುಗೋಪದಿಂ ಚಾಳುಕ್ಯ ಚಕ್ರೇಶ್ವರಂ ಕಲಿಯುಗರಾವಣಂ ಪೆರ್ಮಾಡಿರಾಯಂ ಜೊಮ್ಮಣ್ಣನಂ ಕರೆಯಲು ಮತ್ತೆ ಮತ್ತೆ ಪಡಿಯಜಿರಂ ಕಳುಪುತ್ತಿರಲಿರಲು ಶಿವಲಿಂಗಸಂಪನ್ನೆ ಜಂಗಮಸ್ನೇಹಿ ಲಿಂಗಾರ್ಚನಾನಿರತೆ ಪೆರ್ಮಾಡಿರಾಯನರಸಿ ಸತ್ಯಭಕ್ತೆ *ಲಕುಮಾದೇವಿ ಶಿವ[1]ನಿಂದೆ[1] ವಿಪ್ರವಧೆ ನಿವಿ:ತ್ರವರಸಂ ಜೊಮ್ಮಣ್ಣಂಗೆ ಮುನಿದು ಕರೆಯಲ್ ಕಳುಪಿ ಕುಪಿತನಾಗಿರ್ದಪನೆಂಬ ಕಠಿಣವಾರ್ತೆಯಂ ಕರ್ಣಪರಂಪರೆ[2]ಯಿಂ[2] ಕೇಳ್ದು ಹರಹರಾ ಹರನೆ ಬ[3]ಲ್ಲಂ[3] ಶಿವಭಕ್ತರ್ಂಗಳಿವಿಲ್ಲ [4]ಜಿಹ್ವಾವಮಾನವಾಗಲಾಗದು[4] ಮುನ್ನೆಂದುಂ ಪೊಡಮಡದ ಜೊಮ್ಮಣ್ಣನಿಂದು ಪೊಡಮಡೆ ತನಗೆ ಪೊಡಮಟ್ಟನೆಂದರಸಂ ಮನ್ನಿಸುವನೆಂಬ ಬಗೆಯಿಂ ತನ್ನ ಪ್ರಾಣಲಿಂಗಮಂ ಸಿಂಗರಿಸಿ ಮಾಣಿಕ್ಯಸಿಂಹಾಸನ ರ[5]ಸ[5]ರಸನಜಿಯದಂತೆ ಶಿವಭಕ್ತೆಯರು ಸಹಿ[6]ತೆ[6] ಲಕುಮಾದೇವಿ ಪಿಡಿದಿರ್ದ ಮುಯದೊ[7]ಳು[7]

[8]ಇತ್ತಲ್[8] ಮುಂದೆ ಬ[9]ರ್ಪ[9]ರಸಾಳ್ಗಳಿಂ ಹಿಂದೆ ಬ[9]ರ್ಪ[9] [10]ಪರಿಜನದ ಪು[10]ರಜನ[11]ದ ಮುಂದಿಯ[11] ಕೆಲದೊಳ್ ಬ[12]ರ್ಪ[12] ಭಕ್ತನಿಕರದ ನಡುವೆ ವಿಭೂತಿಯ ಕಾಂತಿ ಸಳಸಳಿಸೆ ರುದ್ರಾಕ್ಷೆಯ ಉಲಿ[13]ವು[13] ಘಲಘಲಿಸೆ ಕೈಯಲಗಿನ ಬೆಳಗು ಬಳ್ಳಿವರಿಯೆ ಕಲಿಯುಗ ವೀರಭದ್ರಂ ಪರ[14]ಸಮಯ[14] ಪರಿಚ್ಛೇದಿ [15]ಪರವಾದಿ[15]ಕೋಳಾಹಳಂ ಜೊ[16]ಮ್ಮ[16]ತಂದೆ ಒಜಿ[17]ಯುಚ್ಚಿ[17]ದ ತ್ರಿಶೂಲದಂತೆ [18]ಒ[18]ಡರ್ಚಿದ ಭಾಳಲೋಚನದಂತೆ ಘುಳುಘುಳಿ[19]ಸಿ[19] ನಡೆತಂದು ಸಭಾನಿಳಯಮಂ [20]ಪುಗುತರು[20]ತಂ [21]ಮತ್ತಂ[21] ತೊಳತೊಳಪ ಲಿಂಗಮಂ ಘಳಿಲನೆ ಕಂಡು ನಿಜಭ[22]ಕ್ತಿಯ ಭರ[22]ದಿಂ ಪೊಡಮಡಲ್ ಕೈಯೆತ್ತುತೊಲ್ಲಡೆ ನಿಂದು ಭವಿಯ ಸಿಂದಿರಲೇಕೆ ಪೊಡಮಡಿಸಿಕೊಳಲೊಲಿವ[23]ಡೆ[23] ಕೆಲಕ್ಕೆ ಬಿಜಯಂಗೆಯ್ವುದೆಂದೆತ್ತಿದ ಹ[24]ಸ್ತಮಂ[24] ಮತ್ತೊಂದೆಸೆಗೆ ಸನ್ನೆದೋಜಿ ಶಿವಲಿಂಗಂ

---

[1] ದ್ರ್ಯಾ (ಕ) [2] ಯುಂಲಕುಮಾದೇವಿ (ಚ) [3] ಲ್ಲ (ಕ) [4] ದ ಚಿನ್ನಂ ಅದ್ದಮಾಗಲದು (ಚಪ) [5] ಸಿ ಅ (ಚಪ) [6] ತ (ಕ) [7] ದೊಳಿತ್ತಲು (ಕ) [8] ಮುಂದೆ (ಕ) [9] ಹ (ಕ) [10] ಪು (ಚಪ) [11] ದಿಂ(ಚ) [12] ಹ (ಕ) [13] ಪು (ಪ) [14] ಮ (ಕ) [15] ಪ್ರಥಮ (ಕ) [16] ಶಿವದೊಶಕ ಮಸಕಾ ಶೂಲಂ ಜೊಮ್ಮ (ಕ) [17] ವುರ್ಚಿ (ಕ) [18] ತೊ (ಚಪ) [19] ಸುತಂ (ಕ) [20] ಪುಗುತ (ಕ) [21] ಮೇಲುಂನೋಡಿ (ಚಪ) [22] ಕ್ತಿಯು ಭಯ (ಕ) [23] ರೆ (ಚಪ) [24] ಸ್ತ (ಕ)

ಸಿಂಹಾಸನಮುಂ ಬಿಟ್ಟು ಭಕ್ತನ ಕೈಯೊಡನೆ ಸಪ್ರನೆ ತಿರುಗಿ ಸರಿಸಕ್ಕೆ ಬಂದು ಕೆ[1]ಲ[1]ಸಾರ್ದು ಗಗನಾಸನಮುಂ ಕೈಕೊಂ[2]ಡಿ[3]ರೆ ಬಳಿಕ್ಕೆ ಪೊಡಸುಟ್ಟು ಸಂತ[3]ಸಂ[1]ಬಟ್ಟು ದೇವದೇವ ಸುಕುಮಾರ ಲಿಂಗ[4]ಸಾರ್ವಭೌಮ[4] ಬಿಸಿಲುಗಾ[5]ಳಿಯೊಳಿರ್ಪರೆ[5] ಸೆಜ್ಜೆಗೆ ಬಿಜಯಂಗೆಯ್ವುದೆಂದು ಬಿನ್ನೈಸಿ ಬಿಜಯಂಗೈಸಿ ನಿರ್ಮಳಚಿತ್ತಂ ಜೊಮ್ಮ[6]ಯ್ಯಂ[6] ಸಭೆಯಂ ಲೆಕ್ಕಿಸದೆ ನಿಂದಿ[7]ರ್ದಿರವಂ[7] ನೋಡಿ ಮೊದಲೊ[8]ಳ್[8] ವಿಷ್ಣು ಪ್ರತುಮೆ ಕಣ್ಣ ನೀ[9]ರನಿಕ್ಕು[9]ತಂ ತಪ್ಪ[10]ರವಂ[10] ನೋ[11]ಡೆ ನೋಡೆ[11] ಶಿವಲಿಂಗ[12]ಮಂ[12] ಕೈಸನ್ನೆ[13]ಯಿಂ[13] ಬಾಸಿದ ಸಾಮರ್ಥ್ಯ[14]ಮಂ[14] [14]ನಿಂದ ಸಿಲುವಂ ಬಗೆಯದ ಬಲ್ಪುಮಂ ಲೆಕ್ಕಿಸದ ಗರ್ವತೆಯಂ ಕೈಕೊಳ್ಳದ ಕಡು ನಿಷ್ಠೆಯಂ ಕಂಡು ಭೂಪಂಗೆ ಕೋಪವಳಿದು ನಂಬುಗೆ ಬೆಳೆದು ಭೀತಿ[1] ಯುದ್ಭವಿ[15]ಸಿ ಏನಯ್ಯ ಜೊಮ್ಮ[16]ಯ್ಯ[16] ನಿರಪರಾಧಿ ಪುರಾಣಭಟ್ಟ[17]ನಂ[17] ಕೊಂದುದಕೆ ಕಾರಣವೇನೆನೆ ಕೇಳರಸ ನಿನಗೆ ವಿಚಾರವಿಲ್ಲ ಪುರಾಣಭಟ್ಟನಂ ಕೊಲ್ಲೆ ಶಿವನಿಂದೆಯಂ ಮಾಡಿ ಹುಸಿನುಡಿದ [18]ದ್ರೋಹಿ[18]ಯಂ ಕೊಂ[19]ದೆನಿ[19]ನ್ನಂ ತಣಿ[20]ಯೆ ತಣಿಯೆ[20]ನೆಂದು [21]ಘೂರ್ಣಿಸುವ ಜೊಮ್ಮಣ್ಣನಂ[21] ಪೆರ್ಮಾಡಿರಾಯಂ ಕಂ[22]ಡು ಈ[22]ಭಕ್ತನಂ ಪರೀಕ್ಷಿಸಿ ನೋಳ್ಪೆನೆಂ[23]ದು ಇ[23]ನ್ನು ಪ್ರತ್ಯಕ್ಷ[24]ಗಂಡಡೆ[24] ಬಿಡುವೆನಲ್ಲದೊಡೆ ದಂಡಿಸುವೆನೆಂದು ನೆನೆ[25]ದೆಲೆ[25] ಜೊಮ್ಮಯ್ಯ ಪುರಾಣಭಟ್ಟಂ ಪುಸಿನುಡಿದುದಕ್ಕೆ *ಪ್ರತ್ಯಕ್ಷಮೇಂ ಪ್ರಮಾಣಂ ಮಾಡುವುದು ಆರ್ಷೇಯವಪ್ಪ ಪುರಾಣದೊಳಗಿರ್ದ ವಚನಮುಂ ನೋಡಲಸತ್ಯವೆಂದುದಕ್ಕೆ ಪ್ರತ್ಯಕ್ಷಮೇಂ. ಆಟಳಿತತನಗಳ ನಮ್ಮೊಳು ಮಾಡಲಾಗದು* ಸದ್ಭಕ್ತಿಯುಳ್ಳೊಡೆ ತೋಱುವುದೆಂದು ಪೆರ್ಮಾಡಿರಾಯಂ ನುಡಿಯೆ ಜೊಮ್ಮ[26]ಣ್ಣಂ[26] ಕೇಳ್ದು [27]ನಸುನಗುತ್ತೆ[27]ಲೆಲೆ ಮರುಳ ರ[28]ಸಾ[28] ಹರಭಕ್ತರೊಳಸತ್ಯ[29]ಮುಂ[29]ಟೆ ದೂಷಕಂ ನರಕಕ್ಕಿಳಿಯಲ್ ಪುಸಿನುಡಿ[30]ಯಿದಕ್ಕಿದೇ[30] ಪ್ರತ್ಯಕ್ಷವೀಗಳಾ ಪೆಣನಂ ಮು[31]ಸುಂ[31]ಕಿಟ್ಟು ತೆಗೆಯಲ್ ಪುಳುವಿನ ರಾಶಿಯಾಗದಿರ್ದಡವನಲ್ಲನಾನಪರಾಧಿ ಎ[32]ನ್ನಂ[32] ಶಿಕ್ಷಿಪುದೆನಲರಸನೊಡಂಬಟ್ಟು ಜೊಮ್ಮಂಗೆ

---

1 ಲಕ್ಕೆ (ಕ) 2 ಡು ಯಿ (ಕ) 3 ಸ (ಪ) 4 ಸರ್ವಾಭಿಮಾನಿ (ಚಪ) 5 ಳಿ (ಕ) 6 ಣ್ಣಂ (ಕಪ) 7 ರ್ದಡರಸಂ (ಕ) 8 ಳು (ಕ) 9 ರಿಕ್ಕು (ಚ) 10 ದವಂ (ಚಪ) 11 ಡೆ (ಕ) 12 ಮ (ಚಪ) 13 ಗೆ (ಕ) 14 ಮಂ ಬಿಜಯಂಗೆಯಿಸಿದ ಸ್ನೇಹಮಂ (ಚಪ) 15 ಪಡಿ (ಕ) 16 ಣ್ಣ (ಕ) 17 ರಂ (ಕ) 18 ದೂಷಿ (ಕ) 19 ದೆಯಿ (ಕ) 20 ಯೆ (ಚಪ) 21 ಹೇಳ್ದ ಜೊಮ್ಮಿತಂದೆಯಂ (ಚಪ) 22 ಡೀ (ಚಪ) 23 ದಿ (ಚಪ) 24 ಕಂಡರೆ (ಚಪ) 25 ವುತ್ತಲೆ ಭಕ್ತ (ಕ) 26 ಯ್ಯಂ (ಕ) 27 ಎ (ಚಪ) 28 ಸೆ (ಚಪ) 29 ವುಂ (ಕ) 30 ಯಿಂತಿದಕ್ಕೆ (ಚಪ) 31 ಸು (ಕ) 32 ನ್ನ (ಕ)

*—* ಈ ಭಾಗಕ್ಕೆ ಚಪ ಪ್ರತಿಗಳಲ್ಲಿ ಬರುವ ಪಾಠಾಂತರಗಳು: ಪ್ರಮಾಣವಾವುದು ವಿಶ್ವರೂಪ ವಿಷ್ಣು ಪುರಾಣಮನೋದಲಸತ್ಯಮೆಂದುದಕ್ಕೆ ಪ್ರತ್ಯಕ್ಷಮಂ ಉಳಿಕೆ ವಾಗ್ಡಿಡಂಭಮಂ ನಮ್ಮೊಡನಾಡಲಾಗದು (ಚ) ಪ್ರಮಾಣವಾವುದು ವಿಶ್ವರೂಪ ವಿಷ್ಣು ಪುರಾಣಮನೋದಲಸತ್ಯಮೆಂದುದಕ್ಕೆ ಪ್ರತ್ಯಕ್ಷಮಂ ಉಳಿದು ವಾಗ್ಡಿಡಂಭಮಂ ನಮ್ಮೊಡನಾಡಲಾಗದು (ಪ)

ಕ್ಕೈಗೊಟ್ಟು ಗಳಗಳನೆ ನಡೆತು[1]ವೆಲೆ[1] ಭಕ್ತಾ ನೀಂ ತೋಱುದಂ ತೋ[2]ಱಿನಲು[2] ಪರಸು ಶೈವನಿಷ್ಠಾನಿಧಿ ಓಸರಿಸದ ಭಾಷೆವಂತಂ [3]ಹಿಮ್ಮೆಟ್ಟದಚಲಿತಂ ಜೊ[3]ಮ್ಮ[4]ಯ್ಯಂ ನಿಂದಲಗಂ ಕಿತ್ತಿ[4]ಲೆ ದೇವಾ ಭೀಮನಾಥ ನಿನಗೆ [5]ಕಟ್ಟಿ[5]ದೊರೆಯು[6]ವ[6]ಧಾರಸಧಾರೆನ್ನ ಬಿನ್ನಪ[7]ವಂ[7] ಪರಸಮಯದ್ವೇಷದಿಂದಱಿವೊಡಂ ಭಕ್ತನೆಂಬ ಗರ್ವದಿಂ ಭವಿಯಂ ಕೊಂದಡಂ [8]ಕೇ[8]ಳ್ದ ಪು[9]ರಾಣ[9] ವೊಪ್ಪದಲ್ಲೆಂ[10]ಬ [10]ಸಂದೇಹದಿಂ ಮಡಿ[11]ಪಿರ್ದೊ[11]ಡಂ ನಿನ್ನ ಮೇಲೆ ಸ್ನೇಹ ವಿಲ್ಲದನ್ಯಾಯದಿಂ ಪ್ರಾಣ[12]ಯಂ[12] ನೋಯಿಸಿ[13]ದೊ[13]ಡಂ ನೀನೆ ಸಾಕ್ಷಿ ಇದೇ ದಿಬ್ಯ ಮೆಂದು ಭಾಷೆಗೊಡುತ್ತಂ ಬಂದು ದೂಷಕನ ಹೆ[14]ಣನಂ[14] ಕಾಣಲಾಗಱಂಬಂತೆ ಭೋಂಕ[15]ನೆ ಹ[15]ಚ್ಚಡದಿಂ [16]ಮುಚ್ಚಿ ಮುಂಕೊಳಿಸಿ[16] ತೆಗೆಯಲಮ್ಮನ್ನು ನಿಂದಕನ ಪಯಮಂ ಕಲಸಿ ಪುಸಿಯು ಪುಂಜಂ ಬಳಸಿ ಬೆಳೆದಂತೆ ನಿಂದೆ[17]ಯ ಗುಡ್ಡೆ[17] ನಿವಿಱಂತೆ ಪಾಪದ ಬೀ[18]ಜ[18] ಒ[19]ಬ್ಬು[19]ಳಿಸಿದಂತೆ ದೋಷದ ಹು[20]ತ್ತು[20] ನೆಗೆದಂತೆ ಹುಳುವಿನ ರಾಶಿ ವಿಲಿವಿಲಿಸುತ್ತಿ[21]ರಲರಸಂ[21] ಕಂಡು ಕಣ್ಮುಚ್ಚಿಕೊಂಡು ತೆಗೆತೆಗೆಯೆಂದು [22]ವೋಹಕ್ಕೆ ಹೇ[22]ಸಿ ಪಾಪಕ್ಕೆ ಹೇಡೈಸಿ ಪುಳುವೆಲ್ಲ[23]ವಂ[23] ಪೊಱ[24]ಯಿಂಕೆ[24] ಚೆಲ್ಲಿ[25]ಸಿ[25] ಪರಿತಂದು ಜೊಮ್ಮಣ್ಣನ ಪದತಳಕ್ಕೆಱಗಿ ನಿಮ್ಮಂ ಪರೀಕ್ಷಿಸಿದ [26]ಕರ್ಮಿಗೆ[26] ಕುರುಣಿಪುದೆಂದು ಪೆರ್ಮಾಡಿರಾಯಂ [27]ಕೈ[27]ಮುಗಿದು ನಿಶ್ಚಲಭಕ್ತನಂ ಭದ್ರಾಸನದ ಮೇ[28]ಲಕ್ಕೆ ಬಿಜಯಂಗೆ ಯಿ[28]ಸಿ ಚರಣಯುಗಳ[29]ಕ್ಕೆ ಇ[29]ಚ್ಛಾಸಿರ ಪೊಂಗಳಂ ಕಾಣಿಕೆಯಿತ್ತು ಕೊಂಡಾಡುತಿರ್ಪ ಸಮಯದೊ[30]ಳ್[30]

ಸದ್ಭ[31]ಕ್ತಿಸಂಪನ್ನೆ[31] ಲಕುಮಾದೇವಿಯರಾರಾಧಿಸಿ ಕಳು[32]ಪಿ[32]ದ ಹೊನ್ನ ಪೊಟ್ಟಣಮಂ ಹಾರೈಸಿ ಕೊಂಡು ರನ್ನ[33]ದ ತೊ[33]ಡಿಗೆಗಳಂ ಹರುಷದಿಂ ತೊಟ್ಟು ದಿವ್ಯ ವಸ್ತ್ರಮನು[34]ಟ್ಟು[34] ಸಿಂಹಾಸನದೊಳೊ[35]ಪ್ಪಿ[35]ರ್ದ ನಿಸ್ಸೀಮನಂ ಕಂಡರಸನೆ[36]ದ್ದು[36] ಕೈಮುಗಿದು ದೇವದೇವ ಮುನ್ನಱಿಯದೋಲೈಸಿಕೊಂಡ ತಪ್ಪಂ ಮನ್ನಿಸಿ ಕರುಣದಿಂ ನೋಳ್ಪುದೆಂದು ಬಿನ್ನೈಸೆ ಕಲ್ಯಾಣಕ್ಕೆ ಯೋಜನಾಂತರದೊಳೊಂದು ಸಂವತ್ಸರಕ್ಕೆ

---

1 ದು (ಚಪ) 2 ರಾಯೆನಲ್ (ಚಪ) 3 ಜೊ (ಚಪ) 4 ಯ್ಯನಲಗಂ ಕೀಳ್ತೆ (ಚಪ) 5 ಕೆಟ್ಟ (ಪ) 6 ನವ (ಚಪ) 7 ವ.ಂ (ಕ) 8 ಪೇ (ಚ) 9 ಣ (ಚ) 10 ಬನಂ (ಚ) 11 ಹಿದೊ (ಕ) 12 ಯ (ಪ) 13 ರ್ದ್ದ (ಚಪ) 14 ಣಂ (ಚಪ) 15 ನ (ಚ) 16 ಮುಸುಂಕಿಕ್ಕಿ (ಚಪ) 17 ಯುಂ ಕೂಡೆ (ಕ) 18 ಜಂ (ಕ) 19 ಬ್ಬ (ಕ) 20 ತ್ತ (ಚಪ) 21 ರೆಯದಂ (ಪ) 22 ಹೇ (ಚಪ) 23 ವ (ಚ) ಮಂ (ಪ) 24 ಕ್ಕೆ (ಚಪ) 25 ಸಿ ಕಳೆದು (ಕ) 26 ಪಾಪಿಗೆ (ಚಪ) 27 ನಿಂದು ಕೈ (ಚಪ) 28 ಲಿರಿ (ಕ) 29 ಕ್ಕಿ (ಕ) 30 ಕ್ಕಿ (ಕ) 31 ಳು (ಕ) 32 ಕ್ತಿ (ಚ) 33 ಹಿ (ಕ) 34 ದೊ (ಕ) 35 ಟ್ಟು ಹೊದ್ದು (ಕ) 36 ಪ್ಪುತಿ (ಪ) 37 ಳ್ದು (ಚಪ)

ಪಸ್ನಿ[1]ಚ್ಚಾರ್[1]ಸಿರ ಪೊನ್ನನಿಕ್ಕಿವ ಪೊಟ್ಟಣಮುಂ ಶಿವಪುರ[2]ವಂ[2] ಮಾಡಿ [3]ಮಹಮನೆಯಂ ವಿಸ್ತರಿಸಿ[3] ಲೀಲೆಯಿಂದಿರ್ಪುದಂದಾನೆ [4]ಕುದುರೆ ಸೇನೆ ಪದಾತಿ ಬಲಂ ಸತ್ಯಶರಣರ ಕೇಳಿಕೆ ಸಹಿತಂ ಆ[4]ಪುರಕ್ಕೆ ಬಿಜಯಂಗೆಯಿಸಿ ಪೆರ್ಮಾಡಿರಾಯಂ [5]ಬೀಳ್ಕೊಂಡು ಕಲ್ಯಾಣಕ್ಕೆ ಪೋಗಲಿತ್ತಲು[5]

ಶಿವಪುರದೊಳಗೆ ಸಕಲಭಕ್ತರ ನಡುವೆ ಸುಕೃತ ಸರ್ವರ ಸೂಜಿಕಾ[6]ಜನೇ[6]ಕನಿಸ್ತಾಲಂಕೃತಸರ್ವಾಂ[7]ಗಶರೀರನ[7]ನ್ಯಸಮಯಪನ್ನಗನೋಘವಹ್ನಿ ಪರದೈವ[8]ಧ[8]ರಾಧರ [9]ಮಹಾಬಲಂ ದುರ್ಜನಗಿರಿವಜ್ರಧರಂ ವೈಷ್ಣವಾರಣ್ಯಪ್ರಳಯಾಗ್ನಿ[9] ಬೊಮ್ಮನ ತಲೆವಿಡಿದವನ ಹೆಮ್ಮೆಯ ಮಗಂ ಜೊ[10]ಮ್ಮಿ[10]ತಂದೆ ಪುಸಿಪುರಾಣ[11]ವಂ[11] ಪೇಳ್ದ [12]ಪುರಾಣಭಟ್ಟ[12]ನಂ ತೀರ್ಚಿ ಪ್ರತ್ಯಕ್ಷಮುಂ ತೋರಿದನೆಂಬಗಣ್ಯಪುಣ್ಯಕೀರ್ತಿ ಧರಣಿಯಂ ಪರ್ವಿ ಪಲ್ಲವಿಸಿ ಬೆಳೆಯೆ ಭೀಮನಾಥನಾಜ್ಞೆಯುಂ ಪೊತ್ತ ಬೇಂಟೆಯ ನೆವದಿಂ ಕಾರಣಿಕನ್ಪಗಂಗ[13]ಳ[13] ಭವದ ಭಾರಮನಿಳಿ[14]ಪುತ್ತಂ[14] ಬಂದ ಜಂಗಮದರ್ಥಿಯಂ ಸಲಿಸುತ್ತಂ ಬೇಡಿದ ಭಕ್ತರ್ಗಿಲ್ಲೆನ್ನದೀವುತಂ ಪಾಡುವ ಶರಣರ್ಗೆ ಮುಯ್ಯಾನುತಂ ಶಿವಗೋಷ್ಠಿಯೊಳ್ ಬೆಳೆವುತಂ ಶಿವಪೂಜೆಯೊಳು ಪರ್ವಿ ಕೊರ್ವುತಂ ಶಿವಶೀಲ ಸಂತಾನಭರಿತ[15]ನಪ್ಪ[15] ಶಿವಪುರದೊಳು ಶೈವಸುಖ[16]ಸಂಕಥಾ[16]ವಿನೋದದಿಂ ತೆ[17]ಲುಂಗು[17] ಜೊ[18]ಮ್ಮ[18]ತಂದೆಗ[19]ಳೊ[19]ಪ್ಪುತ್ತಮಿರೆಯಿರೆ.

---

[1] ಚ್ಚಾ (ಕ) [2] ಮುಂ (ಚಪ) [3] ಸದಾಸಂದ (ಚಪ) [4] ಯ ಮೇಲಿರಿಸಿ ಪುರಮಂ ಪೊಜಿಮಟ್ಟು ಶರಣರ ಸಂದಣಿ ಸಹಿತಾ (ಚಪ) [5] ದಂಡನಾಥಮಂಡಲೀಕರಿಂಡೊಃಲೈಸಿ (ಚಪ) [6] ಜಂ ಏ (ಕ) [7] ಗಂ ಅ (ಚ) [8] ಧಾ (ಕ) [9] ಶಂಭಂ (ಚಪ) [10] ಮ್ಮ (ಕ) [11] ಮಂ (ಕ) [12] ವಿಪ್ರ (ಚಪ) [13] ಳಂ (ಕ) [14] ಪಿ (ಚಪ) [15] ನಾಗಿ (ಕ) [16] ಸಂತತ (ಚಪ) [17] ಲುಗೆ (ಕ) [18] ಮ್ಮಯ್ಯ (ಚಪ) [19] ಳುವೊ (ಕ)

•

# ತೃತೀಯ ಸ್ಥಲಂ

ವೃತ್ತ॥ ಸಮಶೀಲಪ್ರಭವಪ್ರಮೋದ [1]ಶರಣ[1]ವ್ರಾತಂ ಸದಾರಂಜಿಸಲ್
ವಿಮಳಜ್ಞಾನನಿಧಾನನಪ್ರತಿಮನುರ್ವೀವಂದ್ಯನಾಶ್ಚರ್ಯವಿ
ಭ್ರಮಯುಕ್ತಂ ಶುಚಿ ಭೀಮನಾಥ[2]ಚ[2]ರಣಾಂಭೋಜಾತಭೃಂಗಂ ದಯಾ
ರಮಣೀನಾಥನುದಾರಧೀರನೆ[3]ಸೆ[3]ದಂ ಜೊಮ್ಮಯ್ಯನಾಸ್ಥಾನದೊಳ್

ರಗಳೆ॥ ಇಂತು ಶಿವ[4]ಪುರ[4]ದೊಳಪ್ರತಿಮಸುಖದಿಂದಿರ್ದು
ಕಂತುಮದಮರ್ದನನ ಪದಯುಗಳಮಂ ಸಾರ್ದು
ಭೀಮನಾಥನ [5]ಶರಣ[5]ಬೇಂಟೆಗೆಂ[6]ದೆಂದ[6]ಲ್ಲಿ
ಕಾಮಹರನಣುಗ[7]ನುಱತಿಯುತ್ಸವಿಸುತಂ[7]ತಲ್ಲಿ
ಮೃಗಯಾವಿನೋದ ಪರಿಕರ[8]ನೆನಿಸಿ ನಡೆತಂದು[8]
ಸೊಗಯಿಸುವ ಸಮಶೀಲ ಶರಣರೊಳ[9]ಗಿರಲಂದು[9]
ವನದೊಳಗೆ ಸುಳಿವ ಕಾರಣಿಕಮೃಗವೃಂದಮಂ
ತನತನಗೆ [10]ಪರಿತಂದು ನೀರ್ಗೊಂದು[10] ಬಂದಮಂ
ಎಳೆವುಲ್ಗಳಂ ಮೇದು ಕೊಣ[11]ಕಿ[11]ಡುವ ಪುಲ್ಲೆಯಂ
ತಿಳಿನೀರ್ಗಳಂ ಕುಡಿದು ನಲಿದಾ[12]ಡು[12]ವೆರಳೆಯಂ
ಮಱಿಗಳಂ ಕೋಡನೊನೆಯಿಂ[13]ದೆ[13] ತುಱಿಸುತ್ತಿರ್ಪ
[14]ಒಱತವ ಮುಂಬದ[14]ನೊಸರೆ ಹೊಸ[15]ನಸೆ[15]ಗೆ ನಲಿತ[16]ರ್ಪ[16]
ಕಣ್ಮುಚ್ಚಿ ಕಿವಿಯೆಳಲೆ [17]ತ[17]ನು ಕರಗುತಿರೆ ನೆಱೆತವ
ಉಣ್ಮಿ ಪೊಣ್ಮುವ ಪುಳಕದಿಂದೆ ಬೆಬ್ಬನೆ ಬಿಱಿವ
ಮೃಗದ [18]ಹೋಬಳಿವ[18]ಜ್ಜೆಯಱಿಸಿ ಮಱುಗುತ್ತಿರ್ಪ
ಮೃಗವೊಂದಱತೂಂದರೊಳು [19]ಪೊರ್ದಿ[19] ಪೆಣಗುತ್ತಿರ್ಪ
ಪುಲ್ಲೆಯೆರಳೆಗಳ ಹಿಂಡಂ ಹರುಷದಿಂ ಕಂಡು
ಅಲ್ಲಿ ಜೊಮ್ಮಣ್ಣನಾ ಕಾರಣಿಕರಂ ಕಂಡು

---

[1] ಚರಿತ (ಚ) [2] ಶ್ರೀ ಚ (ಕ) [3] ನಿಸಿ (ಕ) [4] ಸುಖ (ಚಪ) [5] ಕರುಣದಿಂ (ಚಪ) [6] ದ (ಚಪ) [7] ನೋಡುತ್ಸವಂಬಡು (ಚ) ಬರೆಯುತ್ಸವಂಬಡು (ಪ) [8] ವೆನಿಸುತಂತಲ್ಲಿ (ಚ) ನೆನಿಸುತಂತಲ್ಲಿ (ಪ) [9] ಗೈದಲ್ಲಿ (ಚಪ) [10] ನೀರ್ಗುಡಿಯಲೆಂದು ಮಿಗೆ (ಕ) [11] ಳಿ (ಕ) [12] ಡಿರು (ಚ) [13] ದ (ಕ) [14] ಪೊರತ ಮುಂದ (ಕ) [15] ಸನಿ (ಚ) [16] ಪ್ಪ (ಕ) [17] ಕೊ (ಕ) [18] ಪೋಬಳಿಪ (ಕ) ಪೋವಳಿಪ (ಪ) [19] ಪೋರ್ದು (ಚಪ)

ರುದ್ರಾಕ್ಷಿಮಾಲೆಗಳನು[1]ಱದೆ ಬಾ[1]ಚಿಯೆ ಕೊಳುತೆ
ರುದ್ರನಿಂ [2]ಬೆಸಸಿತೆ[2]ನ್ನಲ್ಲಿ ತಪ್ಪಿಲ್ಲೆನುತೆ
ಬೆಲ್ಲವತ್ತ್ರದ ಬಿಲ್ಲನಳವಡಲ್ ಪಿಡಿ[3]ಕೈ[3]ಸಿ
[4]ಬಿಲ್ಲೊಳೆಸೆ[4]ವರ್ಧನಾರಿಯನೊಪ್ಪೆ ಮೇಳೈಸಿ
ಕಣಗಿಲೆಯ ಕೋಲ ತುದಿಯೊ[5]ಳು ಹೊ[5]ಳೆವಲಗು ಮೆಱೆಯೆ
ಎಣೆಗೂಡಿ ಪೊಗಲೊಳಗೆ ಪಂಚಾಕ್ಷರಿಗ[6]ಳೊಗೆಯೆ[6]
*ದಿವ್ಯಶರಮಂ ಕೊಂಡು ತಿರುವಾಯ್ಗಳೊಳಗಿಟ್ಟು
ಸವ್ಯಭಕ್ತಂ ಮುನಿದು ನಿಮಿರ್ದು ನೀಡಡಿಯಿಟ್ಟು
ಮುಟ್ಟೆ ದೃಢಬಂಧಂ ಧನುರ್ದಂಡದೊಳಗೆ ಸಲೆ
ದೃಷ್ಟಿಯಂಬಿನ ಕೊನೆಯ ಮೊನೆಯೊಳೆಚ್ಚತ್ತು ನಿಲೆ
*ಕಾರಣಿಕ ಮೃಗ ಶರೀರವನಲ್ಲಿ 'ಲ[7]ಕ್ಷಿಸುತೆ
ಆರೈದು ಶರದ ಮೃಗದೆಡೆಯಂ ವಿವೇಕಿಸುತೆ*
ಘಳಿಲನೆಚ್ಚಂ ಜೊ[8]ಮ್ಮಿ[8]ತಂದೆ ಮೃಗವಳುಕುತಿರೆ
ಅಳವಡೆ ಶರಂ ಶಿರಂಗೊಂಡುರ್ಚಿ ಪಾಱುತಿರೆ
ತೊಡುವುದುಂ ನಡುವುದುಂ ಕಾಣಲಾಗುತ್ತಮಿರೆ
ಬಿಡುವುದುಂ ಪೋಪು[9]ದುಂ ಈ[9]ಕ್ಷಿಸಲ್ ಬಾರದಿರೆ
ಮೃಗಶರೀರಂ ನೊಂದು ಬಿದ್ದುದೀ ಧರೆಯೊಳಗೆ
ನೆಗೆದವು ವಿಮಾನ[10]ದಿಂ[10] ಜೀವವಂ[11]ಬರ[11]ದೊಳಗೆ
ಭಕ್ತಿಬಾಣಂ ತಾಗಿ ಮುಕ್ತಿ ಬಂದೆಡೆಗೊಂಡು
ಯುಕ್ತಿಕೊಳ್ಳದ ಭಕ್ತಿ ಮುಕ್ತಿಯೊಳ್ ನೆಲೆಗೊಂಡು
ವೈರಾಗ್ಯ ಶಸ್ತ್ರ[12]ವೆಂದೆಸುತು[12]ಮಿರಲಂತಲ್ಲಿ
ತಾರಾದ್ರಿಗೈದುವವು ಮೃಗಜೀವವಂತಲ್ಲಿ
ಬಾಣ[13]ತಾ[13] ಗೀರ್ವಾಣ ಪದವಿಯಂ ಕೊಡುತಮಿರೆ
ಜಾಣನೆಸುತಿರ್ದನಾ ಋಷಿಜನಂ ಪರಸುತಿರೆ
ಕಾರಣಿಕರಲ್ಲದ ಮೃಗಂ ಸುಳಿ[14]ಯೆ ಎಸನವಂ[14]
ಮಾರ[15]ಹರನಱುಪಿದ[15] ಮೃ[16]ಗಂಗಳಂ ಎಸುವವಂ[16]

---

[1] ರೆಬಾ (ಕ) [2] ತೆ (ಚ) ವೆಸಸೆ ತ (ಪ) [3] ಕೆಯಿ (ಕ) [4] ಬೀಳಳೆಸ (ಚ) [5] ಳ್ಪೊ (ಕಚ) [6] ಳೆಸೆಯೆ (ಕ) [7] ರ (ಕ) [8] ಮ್ಮಣ್ಣ (ಕ) [9] ದುದನೀ (ಚಪ) ದೊಳ್ (ಚ) [10] ದೊಳು (ಪ) [11] ಜರ (ಚ) ಜರಿ (ಪ) [12] ವಂತೆಸುತ (ಕ) [13] ಮುಂ (ಕ) [14] ಯಲೆಸಂ (ಕ) [15] ನ (ಕ) [16] ಗಗಳಲ್ಲದವನೆಸಂ (ಕ)

* ಈ ಸಾಲುಗಳು ಚ ಪ್ರತಿಯಲ್ಲಿಲ್ಲ.

ಇಂತು ಬೇಂಟೆಯನಾಡಿ ಘನಸುಖನ[1]ನೊಳಕೊಂ[1]ಡು
ಸಂತಸುಖದಿಂ ತಿರುಗಿ [2]ಪು[2]ರದತ್ತ ನಡೆಗೊಂಡು
ಬಂದು ಶಿವಲಿಂಗಾರ್ಚನಂಗೈದು [3]ಪದ್ಮಳವಿ[3]ರೆ
ಸಂದಣಿಪ ಬೇಂಟೆಯಂ ನಿಚ್ಚಲಾಡುತ್ತವಿರೆ
ಜೊಮ್ಮಣ್ಣನೇಕನಿಷ್ಠೆಯ ಭಕ್ತಿಯಂ ಕೇಳ್ದು
ಜೊಮ್ಮಣ್ಣನಾಡುತಿ[4]ರ್ದಾ[4] ಬೇಂಟೆಯಂ ಕೇಳ್ದು
ಕೊಂಡುಗೂಳಿ[5]ಯ[5] ಕೇಶಿರಾಜದಣ್ಣಾಯಕರು
ಪುಂಡರೀಕಾಜಿನ[6]ನ[6] ತನುಮನೋ[7]ದ್ಯವಿ[7]ಕರು
ಎಲ್ಲವುಂ ಲೇಸಾಯ್ತು ಬೇಂಟೆ[8]ಯೊಂ[8]ದೇ ಪೊಲ್ಲ
ಅಲ್ಲಿ ಮಾಣಿಪೆನಭವಭಕ್ತಂ[9]ಗಿ[9]ದಲ್ಲಲ್ಲ
ಎಂದು ತನ್ನೂರಿಂದ ಪೊಱಮಟ್ಟು ನಡೆತಂದು
ಸಂದಣಿಪ ಭಕ್ತ ಸಂಕುಳದಿಂದಲೈತಂದು
ಜೊಮ್ಮಣ್ಣನಿ[10]ರ್ಪ[10] ಶಿವಪುರವನೊಲವಿಂ ಪೊಕ್ಕು
ಸುಮ್ಮಾನದಿಂ[11]ದೆ[11] ಪೊಗಳುತ್ತಂ ಮನಂ ಮಿಕ್ಕು
ಅವರ ನಿಳಯದ ಮುಂದೆ ಉನ್ನತಾಸನವಿಳಿದು
ಶಿವಭಕ್ತರೊಡನೆ ಪರಮಾನಂದ[12]ಮಂ ತ[12]ಳೆದು
ಬಂದೊಳಗೆ [13]ಪುಗುತೆ[13] ಜೊಮ್ಮಣ್ಣನೆಲ್ಲಿಗೆ ಹೋದ
ಇಂದುಧರನ ಪ್ರತಾಪಾಗ್ನಿ ಎಲ್ಲಿಗೆ ಹೋದ
ಎನುತಲ್ಲಿ ಪಿಶಿತಮಾಲೆಗಳಿರ್ಪುದಂ ಕಂಡು
ಮನವ[14]ಳಲ್ದು[14] ಹೇಸಿ ತಿರಿಗಿದನುಮ್ಮಳಂಗೊಂಡು
ಶಿವಭಕ್ತರಂ ದೂರದಿಂ[15]ದೆ[15] ಕೇಳ್ವುದು ಲೇಸು
ಪವಣಿಸ[16]ಲ್[16] ನಮ್ಮಳವೆ ಪೊಗಳುತಿರ್ಪು[17]ದೆ[17] ಲೇಸು
ಎನುತೆ ಬಂದಾ ಪುರದ ಶಿವನಿಳಯದೊ[18]ಳು[18] ಬಿಟ್ಟು
ಅನುನಯದೊಳುಪಕರಣವೆಲ್ಲ[19]ಮುಮ[19]ನಿಂಬಿಟ್ಟು
ಸು[ರು]ಚಿರ ಸ್ಥಾನದೊಳು ಸಿಂಹಾಸನಮನಿಕ್ಕಿ
ಹರುಷದಿಂ ಮೇಲೆ ಮೃದುಸೆನಿಪ ಗದ್ದುಗೆಯಿಕ್ಕಿ

---

1 ನೆಡೆಗೊಂ (ಚಪ) 2 ರುದ್ರಶು (ಚ) 3 ಸುಖದೊಳ (ಚಪ) 4 ಹ (ಚಪ) 5 ಯೊಳು (ಕ) 6 ರ (ಕ) ದ (ಚ) 7 ದ್ರಾವ (ಕ) 8 ವೊಂ (ಕ) 9 ಗ (ಚಪ) 10 ಪ್ಪ (ಕ) 11 ದ (ಕ) 12 ವಂತಿ (ಚ) 13 ಪೊಗುತ (ಕ) 14 ಳಿದು (ಕ) 15 ದ (ಕಚ) 16 ಲು (ಕ) 17 ದು (ಕ) 18 ಳ್ಪೊಕ್ಕು (ಚಪ) 19 ವಂ (ಚ)

ಕಾಮಹರನಂ ಭೀಮ[1]ನಂ[1] ಕುಲಸ್ವಾಮಿಯಂ
ವ್ಯೋಮಕೇಶನನಭವ[2]ನುನ್ನ[2]ತಪ್ರೇಮಿಯಂ
ಸೋಮನಾಥನನಕ್ಕಜಂಬಡೆ ಬಿಜಯಂ[3]ಗೈ[3]ಸಿ
ವಾಮಾರ್ಧನಾರಿಯಂ [4]ನ[4]ಲಿದು ಬಿಜಯಂ[5]ಗೈ[5]ಸಿ
ದೇವಾರ್ಚನೆಗೆ ಕೇಶಿರಾಜದಣ್ಣಾಯಕರು
ಭಾವಿಸುತ್ತಿರ[6]ಲಲ್ಲಿ[6] ಹರನ ಗಣನಾಯಕರು
ಇತ್ತಲಾ ಜೊಮ್ಮಣ್ಣನೊಲಿದು ಬೇಂಟೆಯನಾಡಿ
ಹತ್ತೆಂಟು ಮೃಗಶರೀರಂಗಳಂ ನೆಱಕೊಡಿ
ಬಂದು ಪುರಮಂ ಪೊಕ್ಕು ನಿಳಯಕ್ಕೆ ನಡೆತಂದು
ಬಂದರುಂಟೇ ಶಿವನ ಭಕ್ತರಜಿಸುತಲಿಂದು
[7]ಎಂದು ತಮ್ಮರಸಿಯರ[7]ನೆಂದಿನಂದದಿ ಕೇಳೆ
[8]ಎಂದಲ್ಲಿ[8] ಶಿವಭಕ್ತೆ ಪೇಳ್ದಳುತ್ಸವ ವೇಳೆ
ಶರಣಸಂತತಿವೆರಸಿ ಪಿರಿಯರೊ[9]ರ್ವರು ಬಂ[9]ದು
ಹರುಷದಿಂ ನಿಳಯದೊ[10]ಳಗಂ ಮಿಗೆ ಪುಗುತ್ತಂದು[10]
*ಇಂತಿವಂ ಕಂಡು ನೆಱಹೇಸುತಂ ತಿರುಗಿದರು
ಮುಂತೆ ಪುರದೊಳಗಣ ಶಿವಾಲಯದೊಳೊದಗಿದರು*
ಎನೆ ಕೇಳ್ದು ಜೊಮ್ಮಣ್ಣನತಿಹರುಷಮ[11]ನ[11]ನಾಗಿ
*ಅನುನಯದಿ ನಡೆತಂದನಾನಂದಮಯನಾಗಿ*
ನಡೆತರುತ ನಡೆತರುತ್ತೋರೋರ್ವ[12]ರಂ[12] ಕಂಡು
ಮೃ[13]ಡನ[13] ಶರಣ[14]ರ್ ಪರಮ[14]ಸುಖದೊಳಪ್ಪಿಯೆಕೊಂಡು

---

[1] ನಾಥ (ಚಪ) [2] ನಂ ನ (ಕ) [3] ಗೆಯಿ (ಕ) [4] ವ (ಚಪ) [5] ಗೆಯಿ (ಕ) [6] ಲಿತ್ತ (ಚಪ) [7] ಜೊಮ್ಮಯ್ಯನರಸಿಯಂ (ಚಪ) [8] ಅಮ್ಮಮ್ಮ (ಪ) [9] ರ್ವರ್ಬರ್ಂ (ಚಪ) [10] ಳು ನಿಮ್ಮ ಬರವಂ ಕೇಳ್ದು (ಚಪ) [11] ಯ (ಚಪ) [12] ರುಂ (ಕ) [13] ಡ (ಚಪ) [14] ರೋರೊರ್ವರ್ (ಚಪ)

* ಈ ಸಾಲುಗಳಿಗೆ ಬದಲಾಗಿ ಚ ಪ ಪ್ರತಿಗಳಲ್ಲಿ ಬರುವ ಸಾಲುಗಳು :

ಪಿಶಿತಮಾಲೆಯನಿಲ್ಲಿ ನೆಱಕಂಡು ಪೇಸುತಂ
ಮುಸುಕ ಮೂಗಿನೊಳಿಟ್ಟು ಶಿವಶಿವನೆ ಎನ್ನುತಂ
ತಿರುಗಿ ಪೋದರು ಭೀಮನಾಥನಾಲಯದತ್ತ (ಚ)
ಪಿಶಿತಮಾಲೆಯನಿಲ್ಲಿ ನೆಱ ಕಂಡ ಪೇಸುತಂ
ಮುಸುಕ ಮೂಗಿನೊಳಿಟ್ಟು ಶಿವಶಿವಾ ಎನ್ನುತಂ
ತಿರುಗಿ ಪೋದರು ಭೀಮನಾಥನಾಲಯದತ್ತ (ಪ)

ಇ[1]ರ್ಪ[1]ಲ್ಲಿ ನುಡಿದನಾ ಜೊಮ್ಮಣ್ಣನೊ[2]ಲ್ಮೆ[2]ಯಿಂ
ಸರ್ಪಭೂಷಣನ ತೇ[3]ಜೋ[3]ಭರಣನ[4]ರ್ತಿ[4]ಯಿಂ
ಎನ್ನ ಮನೆಯಿರ್ದಂತೆ ಇಲ್ಲಿ ನೀವಿ[5]ರ್ಪಿ[5]ರೇ
ಉನ್ನತಾನಂದಮಯ ನೀವಿಂತು ಬರ್ಪರೇ
ಬಂದು ಕರುಣಿಪುದೆಂದು ನೆಱೆಬೇಡಿಕೊಳು[6]ತು[6]ಮಿರೆ
ತಂದೆ ಬಿಜಯಂಗೆಯ್ವುದೆಂದು ಕ[7]ರೆಯು[7]ತ್ತುಮಿರೆ
ಅಂದು ದಣ್ಣಾಯಕರು ಗಸಣಿಗೊಳುತಂತಲ್ಲಿ
ನೊಂದು ಸಮಶೀಲವಲ್ಲದೆ ನುಡಿದರಂತಲ್ಲಿ
ಸೋಮ[8]ಯ್ಯನೊಲ್ದು[8] ಸಿಂಹಾಸನವ ನಡೆಗೊಂಡು
ಸೋಮ[9]ಧರನಾ[9] ಪರಮಪೂಜೆಗಳನೊಳಕೊಂಡು
ಇರ್ದಪನಿದಕ್ಕೇನ ಮಾಡುವಂ ಪೇಳಿರೇ
ಇರ್ದಪರಿಯಳವಡಿ[10]ಕೆ[10]ಯಾಯ್ತಿಲ್ಲಿ ನೋಡಿರೇ
ಎನೆ ಜೊ[11]ಮ್ಮ[11]ತಂದೆಗ[12]ಳ್[12] ಪೊಸೆದ ಪೂವಿನ ತೆಱ[13]ದೆ[13]
ತನುಕರಗಿ ಮನದೊಳಗೆ ನಟ್ಟೈಸಿ ತಾನುಱ[13]ದೆ[13]
ಸೋಮ[14]ನಾಥಂಗ[14]ಳವಡಿಕೆಯಾದ[15]ಡಂ[15]ತಿರ್ಕೆ
ಸೋ[16]ಮನಾಥಂ[16]ಸಿಂಹಪೀಠ[17]ಮು[17]ನೆಗಲದಿರ್ಕೆ
ಎಂದೆನು[18]ತ್ತೆ[18]ಪೋಗಲಾಜೊ[19]ಮ್ಮ[19]ತಂದೆಗಳತ್ತ
ಪಿಂದೆ ದಣ್ಣಾಯಕರು ಪರಿಣಾಮದಿಂದಿತ್ತ
ಇರೆ ಜೊ[19]ಮ್ಮ[19]ತಂದೆಗಳ ನೋವ[20]ನಾಱಿಸಲೆಂ[20]ದು
ಚರಿತದಿಂ ತನುಗುಣವ ತೋಱುವೆನಿರಲ್ಕೆಂದು
ಅಲ್ಲಿ [21]ಕೇಶಿಯ[21]ರಾಜ ದಣ್ಣಾಯಕ[22]ರ್ ನಡೆದು[22]
ಸಲ್ಲೀಲೆಯಿಂದೂರ ಪೊಱ[23]ಗ[23]ಣ್ಗೆ ಬರ[24]ಲ[24]ಂದು
ಸೋಮನಾಥಂಗೆ ಸದ್ಭಕ್ತರಂ ಕಾಪಿಟ್ಟು
ನಾಮ[25]ವಂ[25] ನಾಲಿಗೆ[ಯ] ತುದಿಯೊಳಗೆ ಸ್ಥಿತಿಟ್ಟು

---

[1] ಪ್ಪ (ಕ) [2] ನಲುಮೆ (ಕ) [3] ಜಾ (ಕ) [4] ಳ್ತಿ (ಚಪ) [5] ರ್ಪ (ಕ) [6] ತ (ಕ) [7] ರವು (ಚಪ) [8] ಧರನೊಲಿದು (ತ) [9] ನಾಥಂ (ಕ) [10] ಸಿ (ಚಪ) [11] ಮ್ಮ (ಕ) [12] ಳು [13] ದಿ (ಚ) [14] ಧರನ (ಚಪ) [15] ಡಿರ್ದಂ (ಚಪ) [16] ಮ್ಯೆಯನುಂ (ಚಪ) [17] ವ (ಚಪ) [18] ತ (ಚ) [19] ಮ್ಮ (ಕ) [20] ನರಿಪಲ್ಕೆಂ (ಚ) [21] ಕೇಶವ (ಕ) [22] ರ್ಕಂಡು (ಚಪ) [23] ವ (ಚ) [24] ಲೆಂ (ಚಪ) [25] ಮಂ (ಕ)

ಬಂದನೀಶ್ವರ ಭಕ್ತರೊಡನೊಡನೆ ನಡೆದು ಬರೆ
ಬಂದೂರ ಪೊಱಗೆ ಕೆಱೆಯೇರಿ ಏಱು[1]ತ್ತು[1]ಮಿರೆ
ಪಚ್ಚೆಯ[2]ರಸದ ತೊಱೆಗ[2]ಳಿಂತಿರ್ಪ ಗ[3]ದ್ದೆ[3]ಯಂ
ಅಚ್ಚರಿಯ ಫಲ[4]ವಿತತಿ[4] ಹೆಚ್ಚಿದ ವನಾಳಿಯಂ
ತೀವಿದ ಕೊಳಂಗಳಂ ಕಮಲಷಂಡಂಗಳಂ
ಭಾವಕದೊಳಡಿಯಿಡುವ ಹಂ[5]ಸ[5]ಮಿಥುನಂಗಳಂ
ವನದೊಳಗೆ ನೆಱೆವ ವಿದ್ಯಾಧರಿಯರಿಕ್ಕೆ[6]ಯಂ[6]
ತನತನಗೆ ಬರುತಿರ್ಪ ಖಗಮೃಗದ ತೆಕ್ಕೆ[6]ಯಂ[6]
ಮೃಗಜೀವನಮಂ ಕೊಂಡು[7]ಪೋ[7]ಪ ಗಣನಿ[8]ಕರ[8]ಮಂ
ಗಗನದೊ[9]ಳು[9] ಮಿಗೆನೆಗೆವ ಪುಷ್ಪಕಪ್ರಕರಮಂ
ಕೂಡೆ ಕೌತುಕವಾಗಿ ದಣ್ನಾಯಕರ್ ಕಂಡು
ನೋಡಿ ತಲೆದೂಗಿ ಮನದೊಳು ವಿಸ್ಮಯಂಗೊಂಡು
ತಿರುಗಿ ಮತ್ತೊಮ್ಮೆ ನೋಡಲ್ಕೀಸುಮಿಲ್ಲದಿರೆ
ಪಿರಿದಪ್ಪ ಕೌತುಕಂ ಚಿತ್ತದೊಳ್ ತೋಱುತಿರೆ
ಕನಸುಗೊಂಡೆಚ್ಚತ್ತ ತೆಱದಿ ಬೆಱಗಾಗುತಂ
ಮನಸಿನೊಳಗದ್ಭುತವಿದೆಂದು ಮಾತಾಡುತಂ
ತಿರುಗಿಬಂದಾಪುರದ ಶಿವನಿಳಯಮಂ ಪೊಕ್ಕು
ಹರಹರ ನಮಶ್ಶಿವಾಯೆನು[10]ತಂ ಮನಂ[10]ಮಿಕ್ಕು
ಕುಳ್ಳಿರ್ದು ಶಿವಪೂಜೆಯಂ ಮಾಡಲೆಂದಲ್ಲಿ
ಒಳ್ಳಿವರಿದಡರ್ವ ನೋಟದೊ[11]ಳೆ[11] ನೋಡುತ್ತಲ್ಲಿ
ಮಜ್ಜನಕ್ಕೆಱೆಯಲೆಂದಾ ಸೋಮನಾಥನಂ
ಸಜ್ಜನಸ್ನೇಹದಿಂ ಪಾರ್ವತೀನಾಥನಂ
ಕರಕೆ ಬಿಜಯಂಗೆ[12]ಯ್ಯಿಸ[12]ಲೆಂದು ಕಯ್ಯಂ ನೀ[13]ಡೆ[13]
ಹರನಲ್ಲಿ ಜೊಮ್ಮಣ್ಣನೊಳ್ ಚಿತ್ತವಕ್ಕಾಡೆ
ಗದ್ದುಗೆಯ ಮೇಲಿಂದಲತ್ತಿತ್ತ ಚಲಿಸದಿರೆ
ಇದ್ದಿದ್ದಿದೇನಾ[14]ಯಿತೆ[14]ನುತ ನೋಡುತ್ತಮಿರೆ

---

[1] ತ್ರ (ಕಚ) [2] ತೊರೆಯರಸದೊ (ಚ) [3] ದ್ದೆ (ಕ) [4] ತತಿಯು (ಕ) [5] ಸೆ (ಚ) [6] ಯಿಂ (ಪ) [7] ಪೋ (ಚ) [8] ಚಯ (ಚಪ) [9] ಳ್ (ಚ) [10] ತುಮ್ಮಳಂ (ಚಪ) [11] ಳ್ಳು (ಚಪ) [12] ಯ್ಯ (ಚಪ) [13] ಡಿ ಹರುಸದಿಂ ಜೊಮ್ಮಣ್ಣನಿರಿಸಿದಂತಿದೆ ನೋಡಿ ದಣ್ನಾಯಕರ ಮನದ ಹೇಸಿಕೆಗಳೆಯಲೆಂದು ಅಣ್ಣ ಜೊಮ್ಮಯ್ಯನಂ ಮೆಱೆದು ಕೋಱುವೆನೆಂದು (ಚಪ) [14] ಯ್ತೆ (ಪ)

ಮತ್ತೊಮ್ಮೆ ಕರೆಯಲೆಂದೊಲಿದು [1]ಭರದಿಂ[1] ನೋಡೆ
ಉತ್ತಮಂ ಜೊಮ್ಮಣ್ಣ ತಂದೆಗೆ ಮಸಂ ಕೂ[2]ಡೆ
ಬಂದು ನೊಂದೇಕಿರ್ದಪಿರಿ ಮನೆಗೆ ಬನ್ನಿರೇ
ಇಂದೆನ್ನನಿಂತು ನೋಯಿಸಲೇಕೆ ಬನ್ನಿರೇ
ಎನಲಲ್ಲಿ ದಣ್ಣಾಯಕರ್ ಕಂಡು ಸಿಗ್ಗಾಗಿ
ಮನದೊಳಗೆ ಸೋಮನಾಥನ ಪರಿಗೆ ಬೆರಗಾಗಿ
ಭಕ್ತರೊಳು ಛಲವೇಕೆ ಭಕ್ತರೊ[3]ಳು ಬಲುಹೇಕೆ[3]
ಭಕ್ತರೊ[4]ಳು ದುರ[4]ಭಿಮಾನ[5]ದ ವಾಸಿತನವೇ[5]ಕೆ
ಎನುತ [6]ದಣ್ಣಾ[6]ಯಕರ್ ನುಡಿದರಂದಂತಲ್ಲಿ
ಮನಸಿಜಹರಂ ನೀವಿ[7]ದಂತಿರಿಸಿ[7]ದಂತಲ್ಲಿ
ಇರ್ದಪಂ ಸೋಮನಾಥಂ ಜಲಿಸ[8]ನೆ[8]ತ್ತಲುಂ
ಸಾದ್ರ್ಗ ಸಿಂಹಾಸನದಿ ನೆಲೆವಿಡುಕನೆತ್ತಲುಂ
ಸೋಮನಾಥಂ ಬರಲ್ ಬಂದ[9]ಪೆಂ[9] ನಾ[10]ನೆ[10]ನಲು
ಭೀಮನಾಥನ ಕೂಡೆ [11]ಆ[11]ರೋಗಿಸಲ್ಕೆನಲು
ಇರವೇಳ್ದಡಿರ್ದ ದೇವಂ ಸೋಮನಾಥವಿಭು
ಬರವೇಳ್ದ ಬಿ[12]ನ್ನೈ[12]ಸ[13] ಬಾರದಿರ್ಪನೆ ಶಂಭು
ಎಂತೆಂತೆನುತ್ತಲ[13]ಗಿನಾಯುಧಂ[13]ಗೊಳುತಿರಲು
ಮುಂತೆ ದಣ್ಣಾಯಕರ ಕೈಗೆ ಲಿಂಗಂ ಬರಲು
ಓತು ಜೊಮ್ಮಣ್ಣನಂ ತೆಗೆದಪ್ಪಿ ಬಿಗಿ[14]ದಪ್ಪಿ[14]
ಕೌತುಕದ ಮೇಲೆ ಕೌತುಕವಡಸಿ ಮತ್ತಪ್ಪಿ
ಒಡನೊಡನೆ ನಡೆತಂದು ನಿಜನಿಳಯಮಂ ಪೊಕ್ಕು
ಎಡೆಮಾಡಿದೆಡೆಗಳೊಳು ಲಿಂಗಾರ್ಚನೆಗೆ ಮಿಕ್ಕು
ಮಜ್ಜನದ ಪೂಜೆ ಧೂಪಾರತಿಗಳಂ ಕೊಟ್ಟು
[15]ಉಜ್ವಳಿಪ[15] ಲಿಂಗಕ್ಕೆ[16] ನೇ[16]ಹಮಂ ಮುಂದಿಟ್ಟು
ಜೊಮ್ಮಣ್ಣನರಸಿ ಪರಿಯಾಣಕ್ಕೆ ಬಡಿಸುತಿರೆ
ಸುಮ್ಮಾನ ಉಡುಗಿ ದಣ್ಣಾಯಕರ್ ನಡುಗುತಿರೆ

---

[1] ಬ್ಬಿಂದಂ (ಕ) [2] ಭರದಿಂನೋಃ (ಕ) [3] ಮದವೇಃ (ಕ) [4] ಳ್ ಪೂರದ [5] ದಾಸೆಗಳೆಃ (ಚಪ) [6] ಘಂಡನಾ (ಚಪ) [7] ರೆಂದಿರಿಸಿ (ಚಪ) [8] ದೆ (ಚಪ) [9] ಪೆವ್ರ (ಚಪ) [10] ವೆ (ಚಪ) [11] ಯೂ (ಚಪ) [12] ಸ್ನವಿಸಿ (ಕ) [13] ಗಿನಾಯುಕಂ (ಚ) ಗನಾಯುತಂ (ಪ) [14] ಯಪ್ಪಿ (ಚಪ) [15] ಪ್ರಜ್ವಲಿ (ಚಪ) [16] ಸ್ನೇಃ (ಕ)

ಸೋಮನಾಥನನೊಮ್ಮೆ ಬಡಿಸುತಿರ್ಪರನೊಮ್ಮೆ
ಭೀಮನಾಥನನೊಮ್ಮೆ ಜೊಮ್ಮಣ್ಣನುಮನೊಮ್ಮೆ
ನೋಡುತಂ[1] ದಣ್ಣಾ[1]ಯಕರ್ [2]ಕೊರಗಿ ಕರಗುತಂ[2]
ಬಾಡುತಂ ನುಡಿಯಲಮ್ಮದೆ ಕೆಂದಿಕುಂದು[3]ತಂ[3]
ಇರೆ ಜೊ[4]ಮ್ಮಿ[4]ತಂದೆ ಎಲ್ಲನ[5]ನಡುದು[5] ನಸುನಗು[6]ತೆ[6]
ಹರುಷದಿಂ[7]ದಣ್ಣಾಯಕರ[7]ಮೊಗವನೀಕ್ಷಿಸು[8]ತೆ[8]
ಆರೋಗಿಸಲ್ಕಿಕ್ಕಿಯೆನೆ ಸುಮ್ಮನಿರೆ ಕಂಡು
ಮಾರಾರಿಯಣುಗನವರಂಜು[9]ವಿ[9]ರವಂ ಕಂಡು
ಎಲೆ ಸೋಮನಾಥ ದಣ್ಣಾಯಕರ ಮನದಂತೆ
ಪಲಲವಂ ಪಕ್ವಾನ್ನತತಿಗಳಂ ಮಾಡೆಂತೆ
ಎನಲಲ್ಲಿ ಬಿಸು[10]ಪ ಹೂ[10]ರಿಗೆ ಗಾರಿಗೆಗಳಾ[11]ಗೆ[11]
ತನಿವಾಲ ಸಣ್ಣ ಸೇವಗೆ[12]ಯ[12] ಪಾಯಸವಾಗೆ
ತೊಳಗುವಿಡ್ಡಲಿಗೆ ಮಂ[13]ಡಿ[13]ಗೆಗಳಾಗುತ್ತಮಿರೆ
ಕೆಳವೆ[14]ಯೋ[14]ಗರ ಪತ್ರ[15]ಫಳಶಾಕ[15]ವಾಗುತಿರೆ
ಕಂಡು ದಣ್ಣಾಯಕರು ಹಿಗ್ಗಿ ಹಾರೈಸುತಂ
ಹಿಂಡೇಳ್ವ ಪುಳಕದಿಂ[16]ದಾ[16]ರೈಸಲಿಕ್ಕುತಂ
ಸಂಗಡಂ ಲಿಂಗಪ್ರಸಾದಮಂ ಕೈಕೊಂಡು
ಹಿಂಗದಾನಂ[17]ದದಿಂ[17] ಸು[18]ಖ[18]ಮನದೊಳೆಡೆಗೊಂಡು
ಶಿವರಾತ್ರಿಯಂ ಮಾಡಿ ಸಂಗಸುಖದಿಂದಮಿರೆ
ದಿ[19]ವಸ[19]ಕರನುದಯ[20]ಮಾದೊಡಂ ಮಱೆದಿರುತಮಿರೆ[20]
ಶರಣಸಂಗದಿ [21]ನದುಪಗಲ್ವರಂ ಕುಳ್ಳಿರಲ್[21]
*ಇರೆ ಪುರಾತನ ಗೀತಗೋಷ್ಠಿಯೊಳ್ ಕುಳ್ಳಿರಲ್
ಬೇಂಟೆ ಬೇಡೆಂದು ದಣ್ಣಾಯಕ[22]ರ್[22] ಪೇಳುತಿರೆ
ಬೇಂಟೆ[23]ಯೊಂ[23]ದಂ ಮಾಣ್ಬ[24]ದಿನ್ನೆಂ[24]ದು ನುಡಿವುತಿರೆ

---

[1] ದಂಡನಾ (ಚಪ) [2] ಕರಗಿ ಕೊರಗತಿರೆ (ಕ) [3] ತಿರೆ (ಕ) [4] ಮ್ಮ (ಕ) [5] ನೋಡಿ (ಚಪ) [6] ತ (ಚ) [7] ದಂಡನಾಯ್ಕ (ಚಪ) [8] ತ (ಚ) [9] ಥ (ಚಪ) [10] ಪೂ (ಕ) [11] ಗುತಿರೆ (ಚ) [12] ಯು (ಕ) [13] ಡ (ಕ) [14] ಪೋ (ಕ) [15] ಪುಷ್ಪಫಲ (ಚಪ) [16] ಹಾ (ಚ) [17] ದ (ಚಪ) [18] ಖಮಂ (ಚಪ) [19] ವ (ಕ) [20] ವಾಡುದನೇನುಮರಿಯದಿರೆ (ಚಪ) [21] ಇರುಳ್ಪಗಲೆಂಬುದನರಿಯದಿರೆ (ಚಪ) [22] ರುಂ (ಚಪ) [23] ಪೊಂ (ಕ) [24] ದೇನೆಂ

* ಈ ಪಾದ ಚ ಪ್ರತಿಯಲ್ಲಿಲ್ಲ.

ಇತ್ತಲಾ ವನದ ಕಾರಣಿಕಮೃಗತತಿ ನೆರೆದು
[1]ಹೊತ್ತುಹೋಯಿತ್ತು[1] ಬಾರು ಭಕ್ತನೆಂ[2]ದೆಂದು[2]
ಬಂದುಳಿದ ಮೃಗನಿಕರವೊಂದಾಗಿ ನೋಡು[3]ತಂ[3]
ನಿಂದು ತಮ್ಮೊಳಗುಮ್ಮಳಂ ಪುಟ್ಟೆ ನೋಡು[3]ತಂ[3]
[4]ಉಮ್ಮಣ್ಣ[4]ನೆಂಬುವಂ[4] ಸುಕೃತ[5]ಸಿರಿವಲ್ಲ[5]ಭಂ
ಎಮ್ಮೆಮ್ಮ ಜನ್ಮಫಲಂ ನೀಗುವಂ ದುರ್ಲಭಂ
ಎಂದಾಪುರದ ಸುತ್ತಲುಂ ನೆರೆದು ನಿಂದಿರ್ದು
*ಸಂದಣಿಸಿ ಕೊರಳೆತ್ತಿ ಊರ್ಧ್ವಮುಖವಾಗಿರ್ದು
ದೇವಲೋಕಂ ತಪ್ಪಿತೆಮಗೆ ಶಿವಘೋಯೆಂದು
*ಭೂವಳೆಯದೊಳಗೆ ನೊಂದಪೆವು ಶಿವಘೋಯೆಂದು
ಜೊಮ್ಮಣ್ಣ ಕರುಣಿಸುವುದೆಮಗೆ ಶಿವಘೋಯೆಂದು
ಉಮ್ಮಳಿಸಿ ಸುತ್ತಲುಂ ನೆರೆದು ಶಿವಘೋಯೆಂದು
ಪುರದ ನಾಲ್ಕುಂದೆಸೆಗೆ ಘೋಳಿಡುತ್ತಿರಲಲ್ಲಿ
ನೆರೆದ ಮೃಗಸಂಕುಳಂ ಮೊಱೆಯಿಡುತ್ತಿರಲಲ್ಲಿ
ಅಬ್ಬರವಿದೇನೆಂದು ದಣ್ಣಾಯಕರು ಕೇಳೆ
ಉಬ್ಬರಂ ಮೃಗದ ಪುಯ್ಯಲ ವಿಚಾರಿಸಿ ನಾಳೆ
ದೇವ ನೀವೆಂದಂತೆ ಒಂದೇದಿನದ ಬೇಂಟೆ*
ಭೂವಳಯದೊಳಗಿನ್ನು ಪರಮಸುಖ ಬೇ[6]ಱುಂಟೆ[6]
ಕಾರಣಿಕಮೃಗವೆಲ್ಲ ತೀರ್ದವೆಂದೆನುತಮಿರೆ
ನೂರಾರಿಯಲ್ಲಿಗೈದುವೆ[7]ವೆಂ[7]ದು ಪೇಳುತಿರೆ
ಬೆಱಗಾಗಿ [8]ದಣ್ಣಾಯ[8]ಕರ್[9]ಕಂಗಳಂ ಮುಚ್ಚಿ
ನೆಱೆಕೌತುಕಂಗೊಂಡು ಶಿವನ ಮಹಿಮೆಗೆ [10]ಮ[10]ಚ್ಚಿ
ಅಸಮಾಕ್ಷ ನೀನೊಲಿಯೆ ಪಾಪವೇ ಪುಣ್ಯವದು
ಒಸೆದು ನೀನೊಲಿದಂಗನೀತಿಯೇ ನೀತಿಯದು
[11]ದುಷ್ಕಾ[11]ರ್ಯವೇ ಕಾರ್ಯವಕ್ರ[12]ಮವೆ [12]ಕ್ರಮ[13]ವು ಅ[13]ದು
[14]ದುಷ್ಕ[14]ಲಂ ಸತ್ಕುಲವಧರ್ಮವೇ ಧರ್ಮವದು

---

[1] ಪೊತ್ತುಪೋಯಿತೇಕೆ (ಕ) [2] ದಗಿದು (ಕ) [3] ತುಂ (ಕ) [4] ನೇಕೆಬಾರಂ (ಕ) [5] ವ (ಕ) [6] ರೆಂದು (ಚ) [7] ನೆಂ (ಕ) [8] ದಂಡನಾ(ಚ) [9] ರು (ಪ) [10] ನು (ಚಪ) [11] ಅಃಕಾ (ಕ) [12] ನುಂ (ಕ) [13] ವೆಯ (ಕ) [14] ದುಃಕು (ಕ)

ಎಂದು ಪದ್ಯವನೋದಿ ಹಾರೈಸಿ ಹಿಗ್ಗುತಿರೆ
ಇಂದುಧರನಾಜ್ಞೆಗತಿಕೌತುಕಂಬಡುತಮಿರೆ
ನೋಡಿ ದಣ್ಣಾಯಕರನವರೂರ್ಗೆ ಕಳಿಪು[1]ತಂ[1]
ಕೂಡೆ ಸಮಶೀಲ [2]ಗ[2]ಣಸಂತತಿಗೆ ಪೇಳು[3]ತಂ[3]
ಪೊಱಮ[4]ಟ್ಟು[4] ಜೊಮ್ಮಣ್ಣನಲ್ಲಿ ಬೇಂಟೆಗೆ ನಲಿದು
ಕಱತಗೊರಲನಾಜ್ಞೆಯಂ ಪೊ[5]ತ್ತ್ರಭ[5]ವನಂ ನೆನೆದು
ನಡೆತಂದು ವನದೊಳಗೆ ಪೊ[6]ಕ್ಕು[6] ನಲವಿಂ[7] ನಿಂ[7]ದು
ಮೃಡಭೀಮನಾಥ ಕರುಣಿಸು ಸಾಲ್ವುದೆನಗೆಂದು
ತನ್ನಬರವಂ ಪಾ[8]ಱುತಿರ್ದ[8]ಮೃಗನಿಚಯಮಂ
ತನ್ನ ಬಾಣಂಗಳಿಂದೆಚ್ಚನಾ ಕಾಯಮಂ
ಎಸಲಲ್ಲಿ ಮೃಗವೆಲ್ಲ ಬಿದ್ದವವನಿಯ ಮೇಲೆ
ಪೊಸಪುಷ್ಪವೃಷ್ಟಿ[9]ಗಳ್ ಸುರಿದ[9]ವಾತನ ಮೇಲೆ
ದುಂದುಭಿಸ್ವನವುಣ್ಮಿದವು ಗಗನತಳ[10]ದಲ್ಲಿ[10]
ಬಂದುದೊಂದನುಪಮದ ಪುಷ್ಪಕಂ ನಭ[10]ದಲ್ಲಿ[10]
ಬಂದ ಪುಷ್ಪಕವನಾ ಜೊಮ್ಮಣ್ಣನೇಱಿದಂ
ನಿಂದ ಶರಣರು ನೋಡೆ ಗಗನಕ್ಕೆ ಪಾಱಿದಂ
ಮೃಗಕುಲದ ಪುಷ್ಪಕಂ[11]ಬೆ[11]ರಸಿ ನೆಗೆದಂ ನೋ[12]ಡೆ[12]
ಜಗವೆಲ್ಲ ಬೆಱಗಾಗೆ ಪೋಗುತಿರ್ದಂ [13]ಕೂಡೆ[13]
ಬಂದು ನಂದೀಶ್ವರನ ಬಾಗಿಲೊಳಗಂ ಪೊಕ್ಕು
ಇಂದುಧರನಂ ಕಂಡು ಭಕ್ತಿಸುಖ[14]ದಿಂ[14] ಮಿಕ್ಕು
ದೇವಮೃಗವೇಷ[15]ದಾ[15] ಋಷಿ[16]ಗಳೆಲ್ಲರ[16] ತಂದೆ
[17]ಆ[17]ವ ಪರಿಯಧಿಕರ್ಗೆ ಕರುಣಿಸುವುದೆಲೆ ತಂದೆ
ಎಂದು ಮೆಯ್ಯಿಕ್ಕಿ ಪಟ್ಟಿರ್ದ ಜೊಮ್ಮಣ್ಣ[18]ನಂ[18]
ಇಂದುಧರನಕ್ಕಱಿಂ ನೋಡಿ [19]ಜೊಮ್ಮಣ್ಣನಂ[19]
ಪಿಡಿದಪ್ಪಿ ತೆಗೆದಪ್ಪಿ [20]ನೇ[20]ಹದಿಂ ಮುಂಡಾಡಿ
ನುಡಿದು ನಂದೀಶಂಗೆ ಬೆಸಸುತಂ ಕೊಂಡಾಡಿ

---

[1] ತುಂ (ಕ) [2] ಗು (ಚಪ) [3] ತುಂ (ಕ) [4] ಟ್ಟ (ಪ) [5] ತ್ತು ಶಿ (ಕ) [6] ಕ್ಕ (ಚ) [7] ದಂ (ಚಪ) [8] ದುರ್ಗನಿಂದ (ಚಪ) [9] ಸುರಿತಂದ (ಚಪ) [10] ದೊಳಗೆ [11] ವೆ (ಚಪ) [12] ಡ (ಚ) [13] ನೋಡೆ (ಕ) [14] ಮಂ (ಚಪ) [15] ದ (ಕ) [16] ಯರೆಲ್ಲಂ (ಕ) [17] ನಾ (ಚಪ) [18] ನಂ ಕಂಡು (ಪ) [19] ಹರುಷಂಗೊಂಡು (ಚಪ) [20] ಸ್ನೇ (ಚ)

ಎನ್ನ ನಿಂ[1]ದೆಗೆ[1] ಕೋಪಿಸುತೆ ಕೊಂದರಿಂತುಂಟೆ
ಎನ್ನ ಭಕ್ತರ್ಗೆಯಾನಲ್ಲದಿನ್ನೊಂದುಂಟೆ
ಭಾಪುರೇ ಜೊಮ್ಮಣ್ಣ [2]ಧೀ[2]ವುರೇ ಜೊಮ್ಮಣ್ಣ
ಭಾಪು [3]ಮರುಳು[3] ಭಾಪೆನ್ನ ಭಕ್ತ್ರಸಿಧಿ ಜೊಮ್ಮಣ್ಣ
ಎಂದು ಜೊಮ್ಮಣ್ಣಂಗೆ ಗಣಪದವಿಯುಂ ಕೊಟ್ಟು
ಬಂದ ಋಷಿವೃಂದಮುಂ ರುದ್ರಲೋಕದೊಳಿಟ್ಟು
ಪೊಸಜಡೆಯ ಶಶಿಕಳೆಯ ವಿಷಕಂಠನೊಪ್ಪಿದಂ
ಬಿಸುಗಣ್ಣ ಮಿಸುಪನವಭಸಿತಾಂಗನೊಪ್ಪಿದಂ
ಬ್ರಹ್ಮಪಂಚಮುಶಿರಸ್ಥಿತಹಸ್ತನೊಪ್ಪಿದಂ
ಬ್ರಹ್ಮಾಂಡ ಫಳಭರಿತ ಕಲ್ಪ[4]ತರುವೊ[4]ಪ್ಪಿದಂ
ಆಹಾ ಮಹಾ[5]ಮಹಿಮ[5] ಘನ[6]ದೇವ[6]ನೊಪ್ಪಿದಂ
[7]ಆಹ[7] ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

ಅಮ್ಮಮ್ಮ ಶಂಕರಂ ಗಿರಿ
ಶಮ್ಮದ್ಗುರು ಕೃಪೆಯೊ[7]ಳೀ[7]ಗೆ ಸದ್ಭಕ್ತಿಯ[8]ನೊ
ಲ್ದಿಮ್ಮೆ[8]ಳು ಚಂದ್ರಾಭರಣಂ
ಜೊಮ್ಮಣ್ಣನ ಕಂದನೆಂದು ಹಂಪೆ[ಯ]ರಾಯಂ ||

---

[1] ದೇಕೆ (ಕ) [2] ದೇ (ಕ) [3] ನಿಧಿ (ಕ) ಮಜ (ಚ) [4] ಕುಜನೊ (ಚಪ) [5] ಮಹಾ(ಕ)
[6] ಹೇಜ (ಪ) [7] ಹಾಹ (ಚಪ) [8] ಳೆನ (ಕ) [9] ನಿತ್ತೆನ್ನೊ (ಕ)

## ೪. ಬಾಹೂರು ಬೊಮ್ಮಯ್ಯಗಳ ರಗಳೆ

ಕಂದ||
ಸಾಹಸನಿಧಿಯೆನಿ[1]ಸುವ[1] ವೃಷ
[2]ವಾಹಂ[2] ಫಣಿರಾಜಕಂಕಣಂ ರಾಜಧರಂ
ಬಾಹೂರ ಬೊ[3]ಮ್ಮಿ[3]ತಂದೆಯ
ನಾ[4]ಹಾ[4] ಮೆಚ್ಚಿ[5]ದಂ ಪುರಾರಿ[5] ಹಂಪೆಯರಾಯಂ ||

ರಗಳೆ||
ಶ್ರೀ ಮೇರುವಿಂಗೆ [6]ತೆಂಕಣ[6]ದಿಶಾಭಾಗದೊಳ್
ಭೂಮಿಗೆ ವಿಚಿತ್ರ[7]ವೆನಿಸಿಪ್ಪುದ[7]ತಿ ರಾಗದೊಳ್
ಹೆಸರು ಕಲ್ಯಾಣಪುರವಾಪುರಪ್ರಾಂತದೊಳ್
ಎಸೆವುದಂತೊಂದು ಯೋಜನದ ಪ್ರಮಾಣದೊಳ್
ಶಿವನ ತೋಳ್ತೊಡೆಯ ಪೆಸರಿಟ್ಟರಂತೊಪ್ಪ[8]ದಿಂ[8]
ಭುವನದೊಳ್ ಬಾಹೂರೆನಿಪ್ಪೊಂದು ನಾಮದಿಂ
ಒಪ್ಪುವಾ ಪುರದೊಳೊರ್ವಂ ಶರಣನಿರುತಿರ್ಪ
[9]ನ[9]ಪ್ರತಿಮನತುಳಬಳನಭವನಾಜ್ಞೆಯೊ[10]ಳಿರ್ಪ[10]
ಆತನ ಪೆಸರ್ ಬೊ[11]ಮ್ಮಿ[11]ತಂದೆಯೆಂಬುದು ಜಗಕೆ
ನೂತ[12]ನಂ ತನ್ನ[12] ಚಾರಿತ್ರವ[13]ದು[13] ಕಲಿಯುಗಕೆ
ನೇಮಸ್ತನುತ್ತಮಸ್ನೇಹಿ ಪರಮಧ್ಯಾನಿ
ಕಾಮಹರನಚಲಭಕ್ತಿಯ ಭಾವದಭಿಮಾನಿ
[14]ಆರ್ತಪರನ[14]ತಿಕರುಣಿ ನಿರ್ಮಳಂ ನಿಶ್ಚಳಂ
ಸ್ವಾರ್ಥವೆನಿಸುವ ಶಿವನ ಭಕ್ತಿಭರದುಜ್ವ[15]ಳಂ[15]
ಮಾಹೇಶ್ವರರ್ ಬಂದ[16]ಡಿ[16]ದಿರಾಗಿ ಮೆಯ್ಯಿಕ್ಕಿ
ಆಹಾಯೆನುತ್ತೆ[17]ದ್ದು[17] ಗಣಪದಕೆ ಮೆಯ್ಯಿಕ್ಕಿ

---

1 ಪ (ಪ) 2 ಭವಾಹನ (ಚಪ) 3 ಮ್ಮ (ಕ) 4 ಹಾಹ (ಚ) 5 ದನೆಮ್ಮ (ಚ) 6 ದಕ್ಷಿಣ (ಚಪ) 7 ವೆಂದೆನಿಸುವ (ಚ) ವೆಂದೆನಿಪುದ (ಪ) 8 ದೊಳ್ (ಕ) 9 ಅ (ಚಪ) 10 ಳಗಿರ್ಪ (ಚ) 11 ಮ್ಮ (ಕ) 12 ನದ (ಚಪ) 13 ಇದು ಈ (ಚಪ) 14 ಅರ್ಥಪತಿಯ (ಕ) 15 ಲಂ (ಚ) 16 ರೆನೆರಿ (ಕ) 17 ಳ್ದು (ಕ)

ನಿಂದು ಕೈಮುಗಿದೆನ್ನ ಪುಣ್ಯವೆಯ್ತಂದು[1]ದೇ[1]
ಇಂದುಧರನತುಳಸುಖವೊಲಿದು ಕವಿತಂದು[1]ದೇ[1]
ಎನ್ನ ಭಾಗ್ಯದ ಬೆಳಸು ವಿಪುಳಫಳವಾದುದೇ
ಎನ್ನ ಹೆಂಪಿನ ಹೆಚ್ಚು ಸುಧೆಯು[2]ಮಿದಿ[2]ರಾದುದೇ
ಶಿವನ ಸಂತತಿ ಕರುಣದಿಂದ ನಡೆತಂದು[3]ದೇ[3]
ಶಿವನ ಬಳಗಂ ಭಕ್ತಿ[4]ಯಂ[4] ಕೂಡಲ್ ಬಂದು[5]ದೇ[5]
ಎಂದು ಬಿಜಯಂಗೈಸಿ ತಂದು ಮಿಗೆಸಡಗರಿಸಿ
ಸಂದಣಿಪ ಹರುಷದಿಂದುಚ್ಚಾಸನದೊಳಿರಿಸಿ
ಪುಳಕತತಿ ಪೊಣ್ಮುತಿರೆ ಚರ[6]ಣಂಗಳಂ[6] ತೊಳೆದು
ನಲಿದು ಪಾದೋದಕಂಗಳ[7]ನೊಲುಮೆ[7]ಯಿಂ ತಳೆದು
ಭಾಳದೊಳಗೊಲಿದೊತ್ತಿ [8]ಕಣ್ಗಳೊಳ್ ನ[3]ಲಿದೊತ್ತಿ
ಮೇಲೆನಿ[9]ಪ ಉ[9]ತ್ತಮಾಂಗದೊ[10]ಳೊತ್ತಿಕೊಳುತೊ[10]ತ್ತಿ
ಆನಂದದಿಂ[11]ದೆ ಆರೋಗಿಸಲ್ಕಿಕ್ಕುತುಂ[11]
ನಾನಾ ಸುಖಂಗಳಂ ತರದಿಂದೆ ಸಾರ್ಚುತುಂ
ಹೊನ್ನ ರನ್ನದ ತೊಡ[12]ವು[12] ನವ್ಯವಸ್ತ್ರ[13]ವ[13]ನಿತ್ತು
ಮನ್ನಿಸುತ್ತವರಂಘ್ರಿ[14]ಗಳ[14]ನಲ್ತಿಯಿಂ ಪೊತ್ತು
ಕಳಿಪುವಂ ಶರಣತತಿ [15]ಪರಸುತಿರೆ[15] ರಾಗದಿಂ
ಇಳಿಪುನಂ ಸಂಸಾರಭಾರ[16]ಮಂ[16] ಬೇಗದಿಂ
ಇಂತಪ್ಪ ಬಾಹೂರ ಬೊ[17]ಮ್ಮಿ[17]ತಂದೆಗೆ ಕರಂ
ಕಂತುಮದಮರ್ದನನ ನೇಹ[18]ವೊಂದತಿಭ[18]ರಂ
ಮಿಗೆ ಪೋಪನೆಲ್ಲಿಯುಂ ಸೋಮವಾರದೊಳತ್ತ
ಬಗೆಮಿಗಲ್ ಕಲ್ಯಾಣಪುರದ ಪುರಹರನತ್ತ
ಒಲ[19]ವಿನಿಂ[19] ತ್ರಿಪುರಾಂತಕಪ್ರಭುವನೀಕ್ಷಿಸು[20]ತ್ತೆ[20]
ಕಲಿಮಲಿನ ಕುಲವನಂದಂದಿಂಗೆ ಶೋಷಿಸು[20]ತ್ತೆ[20]

---

[1] ವೇ (ಕ) [2] ಮಿದು (ಕ) ಯಿದಿ (ಚ) [3] ದೆನೆ (ಕ) [4] ಯ (ಕ) [5] ದೆನೆ (ಕ) [6] ಣ ತಳಮು (ಚ) [7] ನಲ್ಮೆ (ಚ) [8] ಕಂಗಳೊಳಗೊ (ಪ) [9] ಸುವು (ಕ) [10] ಳಂ ನಲಿದೊತ್ತಿ (ಕ) ಳು ಉರದೊಳಗೊತ್ತಿ (ಪ) [11] ದಿಂದಾರೋಗಿಸಲ್ಕಿಕ್ಕುತಂ (ಚ) ದಮಾರೋಗಿಸಲ್ಕಿಕ್ಕುತಂ (ಪ) [12] ವ (ಚ) [13] ಮ (ಕ) [14] ಯುಮ (ಕ) [15] ಗೀಯುತ್ತೆ (ಕ) [16] ವಂ (ಕ) [17] ಮ್ಮ (ಕ) [13] ವುಂಟತಿವ (ಕ) ವುಂಟತಿ ಭ (ಚ) [19] ನಿಂದೆ (ಕ) [20] ತ (ಚ)

ಇದು [1]ನೇ[1]ಮವಾಗಿರ್ಪುದಾ ಪರಮ ಭಕ್ತಂಗೆ
ಸವನುಳ [2]ಸದಾಶಿವ[2] ಶಿವಾರ್ಚನಾಸಕ್ತಂಗೆ
ಇರ[3]ಲೊಂದು[3] ಸೋಮವಾರದೊಳಂದು ಪೂಜಿಮಟ್ಟು
ಪುರಹ[4][ರ][4]ಧ್ಯಾನಮಂ ಮನದೊಳಗೆ [5]ಮುಂದಿಟ್ಟು[5]
ಬಾಹೂರ[6]ನೊಪ್ಪ[6]ದಿಂ ಕ[7]ಳ[7]ದು ವಿಗೆ ನಡೆಗೊಂಡು
[8]ಸಾ[8]ಹಸಾಭರಣನತಿನಿಷ್ಠೆಯಂ ಕೆಳೆಗೊಂಡು
ಮೇಲೆ ರುಬ್ಬಲ್ಲರಿನೆಗೆಯಲುನ್ನತಾಸನವೇಱಿ
ಕಾಲಾಳ್ ತುರಂಗ[9]ಬ[9]ಲವೊಡನೆ ಬರುತಿರೆ ಮೀಱಿ
ಬರುತಿರ್ದನಪ್ರತಿಮ ಶಿವಭಕ್ತಿಭೂಷಣಂ
ಬರುತಿರ್ದನಮ್ಮಮ್ಮ ಸಂಸಾರಶೋಷಣಂ
ಬಂದು ಕಲ್ಯಾಣಪುರಮಂ ರಾಗದಿಂ ಪೊಕ್ಕು
ಸಂದ ಪುರವೀಥಿಯಂ ನೋಡುತೆ ಮನಂಮಿಕ್ಕು
ಬರುತಿರ[10]ಲ್ ಮುಂ[10]ದೊಂದು ಬಿಳಿಯ ಜೋಳದರಾಶಿ
ನರರ ಜೀವನವ [11]ರಕ್ಷಿಸುತಿಪ್ಪ[11] ಹೊಸರಾಶಿ
ಇರಲದಂ ಮುಂದುಗೊಂಡೊರ್ವ[12]ನಾಬ್ಯ[12]ವಹಾರಿ
ಕರೆ[13]ವುತಂ[13] ಮಾಱು[14]ಗೊಂಬವ[14]ರನತ್ಯುಪಕಾರಿ
ಎಲೆಲೆ ಶಂಕರಗಂಡನಂ ಕೊಳ್ಳಿರೇ ಎನುತೆ
ಸಲೆ ಬರ್ದುಂಕಿರೆಯಮೃತಮಯ ಧಾನ್ಯ[15]ವೆಂದೆನುತೆ[15]
ಇರ್ಪಲ್ಲಿ ಜೊ[16]ಮ್ಮೆ[16]ತಂಡೆಗಳೊಲಿದು ನೋಡು[17]ತುಂ[17]
ಬರ್ಪಲ್ಲಿಯೊರ್ವ ಸವಣಂ ಕಟಕಿಯಾಡು[17]ತುಂ[17]
ಜೋಳದ ಪೆಸ[18]ರು ಶಂ[18]ಕರನ ನಾಮ[19]ವೆಂತಾ[19]ಯ್ತು
ಆಳ[20]ಗೊಂಬರನಱಿಯರಕಟ ಶಂಕರನಾಯ್ತು[20]
ಇದಕೆ ಪ್ರತ್ಯಕ್ಷಮಂ ತೋಱಬಲ್ಲವರುಂಟೆ
[21]ಅದಿರದೀ[21] ಜೋಳ[22]ಮುಮನೋ[22]ಯೆನಿಸಿದವರುಂಟೆ

---

[1] ನಿಯ (ಚಪ) [2] ಸದಾದಿತ (ಕ) ಶಂಕರ (ಚ) [3] ಲೊವ್ಮೈ (ಕ) [4] ರನ (ಕಚಪ) [5] ಮೊದಲಿಟ್ಟು (ಕ) [6] ನೋಪ (ಚ) [7] ಳೆ (ಚಪ) [8] ಸ (ಕ) [9] ಕು (ಕ) [10] ಲ್ಮೊಂ (ಚ) [11] ರಂಜಿಸುತಿರ್ಪ್ಪ (ಕ) [12] ನವ್ಯ (ಚ) ನಾವ್ಯ (ಪ) [13] ಯುತುಂ (ಕ) [14] ಗೊಳ್ವ (ಕ) [15] ವಿದೆಯೆನುತೆ (ಕ) ವಿದೆಯನುತ (ಚ) [16] ಮ್ಮ (ಕ) [17] ತಂ (ಚ) [18] ಶರ (ಕಚ) [19] ವೇಕಾ (ಚ) [20] ಗೊಳ್ಪರನರಿಯಿರೇ ಭಕ್ತಿಯಂತಾಯ್ತು (ಕ) [21] ಯಧಿಕರೀ (ಕ) [22] ಮುಂ ಓ (ಚ)

ಎಂಬ ನುಡಿಗೇಳ್ದು ಭೋಂಕನೆ ದಂಡಿಗೆಯನಿಳಿದು
ಅಂಬಕತ್ರಯನ ಸುತನತಿ ಕೋಪ[1]ಮಂ ತಾಳಿದು
[2]ಎಂತೊ ಅರುಹತಕನ್ನಿ[2] ಬಗುಳುತಿರ್ದಪೆಯೆನುತೆ
ಮುಂತಿರ್ದ ಭಕ್ತಾಳಿಯನರ್ಥಿಪುದೆಂದೆನು[3]ತೆ[3]
ಪುರಜನಂಗಳ್ ನೆರೆದು ನೋಡು[4]ತ್ತ[4]ವಿರಲಲ್ಲಿ
ಪರಸಮಯಿ[5]ಗಳ್ ಸರಿಯಲನುಮಾಡು[5]ತಿರಲಲ್ಲಿ
ಮಱಿದು ನುಡಿ[6]ದಾರುಹತನೆಡೆ ಬಿಕ್ಕಿ ಬಿರಿವು[6]ತಿರೆ
ಹೆಱಸೂಡಿದನ ಭಕ್ತರೆಲ್ಲ ಮೆಯ್ವೆ[7]ಚ್ಚು[7]ತಿರೆ
ರಾಸಿಯಂ ಬಲಸಂದು ಭಾಷೆಗುಡು[8]ತಂ[8] ನಿಂದು
ಸೂಸ[9]ದಚ್ಚಱುವಿನೊಳಗಣ್ಗೆ[9] ಶಿವನಂ ತಂದು
ಪರಮಗುರುವೇ ಶಂಕರಾ ಶಂಕರಾ ಎಂದು
ಕರೆಯೆ ಜೋಳದರಾಶಿಯೊಳಗಣಿಂ[10]ದಂ[10]ತೊಂದು
ಪ್ರಣ[11]ವ[11]ಮಯ[12]ನೆಂಬುದಂ[12] ಧರೆಗೆ ಕೇಳಿಸುವಂತೆ
ತ್ರಿಣಯ[13]ನಂ[13] ಭಕ್ತನೆಂದುದನುದ್ಧರಿಸುವಂತೆ
ಹರುಷದಿಂದೋಯೆಂಬ ನುಡಿ ಮೂವಡಿಸಿ ಮೀಱೆ
ನೆರೆದ ನೆರವಿಗೆ ಶರಣನಲ್ಲಿ ನಂಬುಗೆಯೇಱೆ
ಇರಲಸ್ತ್ರದೋಡಿದಂ ಸವಣನೆಂಬು[14]ವನಂದು[14]
ಶರಣರೆಲ್ಲಕ್ಕಱಿಂ ಕೊಂಡಾಡು[15]ತಂ[15] ಬಂದು
ಕಲ್ಯಾಣಪುರದೊಳಗೆ ಭರದಿಂದೆ ಮೆಱೆಯಿಸುತೆ
ಕಲ್ಯಾಣ[16]ಪುರಜನಂ[16] ಪರಸು[17] ತ್ತಂ[17] ರಾಗಿಸುತೆ
ಇರ್ದ ಗಣತತಿವೆರಸಿ ಹರುಷದಿಂ ನಡೆತಂದು
ಸಾರ್ದು ಶಿವನಿಳಯಮಂ ಪ್ರೇಮದಿಂ ಪುಗುತಂದು
ತ್ರಿಪುರಾಂತಕಪ್ರಭುವನಾನಂದದಿಂ ಕಂಡು
ಕಪಟರಹಿತಂ ನಿತ್ಯನೇಮಕ್ಕೆ ನೆಲೆಗೊಂಡು

---

1 ದೊಳ್ಪ (ಕ) 2 ಯೆಂತಾರುಹತನುಂ ನೀ (ಕ) ಯೆಂತಾರುಹತ ಕುಲಕುನ್ನಿ (ಚ) 3 ತ (ಚ) 4 ತ್ತ (ಚಪ) 5 ಗಳ್ಸರಿಯಲನುವಾಗು (ಕ) ಗಳು ಸರಿಯಲನುಮಾಡು (ಪ) 6 ದಾರುಹತನೆರ್ದೆದಿಕ್ಕ್ನಾರು (ಕ) ದರುಹತನಯದೆ ಬಿಕ್ಕಿಬಿರಿವು (ಚ) 7 ರ್ಚು (ಕ) 8 ತಂ (ಚಪ) 9 ದೆಚ್ಚಱಿನೊಳಗಣ್ಗೆ (ಕ) ದಚ್ಚರುವಿನೊಳಗಿಂಗೆ (ಪ) 10 ತಂ (ಚ) 11 ಮ (ಚ) 12 ವೆಂಬುದಂ (ಚಪ) 13 ನುಂ (ಚ) 14 ದನಂದು (ಕ) 15 ತಂ (ಚಪ) 16 ಪುರುಷನಿಂ (ಕ) 17 ತಂ (ಚಪ)

ಶಿವಭಕ್ತಿ ತನ್ನಂ ಬಲಂಗೊಂಡು [1]ಬಲವಂದು[1]
ಶಿವನಿಷ್ಠೆ ಕೈಯಿ[2]ಕ್ಕಿ[2] ಮೆಯ್ಯಿಕ್ಕು[3]ತಂ ನಿಂದು[3]
ಆಗಮಸ್ಥಾನದೊಳ್ ಭಸಿತಮಂ ತೀವಿಟ್ಟು
ರಾಗದಿಂ ರುದ್ರಾ[4]ಕ್ಷೆ[4]ಗಳನಳವಡಲ್ ತೊಟ್ಟು
ಆನಂದಜಲದೊಡನೆ ದ[5]ರ್ಶ[5]ನಂ ಮಾಡು[6]ತಂ[6]
ನಾನಾಪುಳಕದೊ[7]ಳ್ ಸ್ಪರ್ಶ[7]ನಂ ಮಾಡು[8]ತಂ[8]
[9]ನೆಱೆ[9]ಕೃತಾರ್ಥತೆಯೊಡನೆ ಪಾದೋದಕಂಗೊಂಡು
[10]ಹೆಱೆಸೂಡಿದನನ[10] ಪ್ರಸಾದಮಂ ಕೈಕೊಂಡು
ತಾಳಮಂ ಕೈಕೊಂಡು ನಾದಪ್ರಿಯ[11]ನ ನೆ[11]ಱೆಪಾಡಿ
ಆಳಾಪದಿಂ ಪುರಾತನರ ಗೀ[12]ತಂ[12] ಪಾಡಿ
ನಿಂದಿರ್ದು ಕೈಮುಗಿದು ನೋಡಿ ಬಿನ್ನೈಸು[13]ತುಂ[13]
[14]ಸಂದಿರ್ದ ಕಡುನಿಷ್ಠೆಯಿಂದೊಲಿದು ಪಾಡುತುಂ[14]
[15]ದೇವ ನೀಂ ನೆನೆಯಿಸಲು ನೆನೆವೆನೆಲೆ ಶಂಕರಾ[15]
ದೇವ ನೀಂ ನುಡಿಯಿಸಲು ನುಡಿವೆನೆಲೆ ಶಶಿಧರಾ
[16]ದೇವ ನೀಂ ನಡೆಯಿಸಲು ನಡೆವುತಿರ್ಪೆಂ ಶಿವನೆ[16]
ದೇವ ನೀನೆಂತಿರಿಸಿದಂತಿರ್ಪೆನೆಲೆ ಭವನೆ
ದೇವ ನೀನಾಡಿಸುತ್ತಿರ್ಪ ಜಂತ್ರದ ರೂಪು
ದೇವಯೆನಗಾವಗಂ ನಿ[17]ನ್ನ[17] ಕರುಣದ [18]ಕಾಯ್ಪು[18]
ಎಂದು ಬಿ[19]ನ್ನೈ[19]ಸು[20]ತುಂ[20] ಭರ್ಗನಂ ಬೀಳ್ಕೊಂಡು
ಇಂದುಧರನಲ್ಲಿ ಕಾರುಣ್ಯಮಂ ಕೆಳೆಗೊಂಡು
ತಿರುಗಿದಂ ಬಾಹೂರ[21]ದೆಸೆ[21]ಗೆ ಕಟ್ಟಭಿಮಾನಿ
ಹರನ [22]ಪುರಹರನ ಶಂಕರನ ಚರಣ[22]ಧ್ಯಾನಿ
ಶರಣ[23]ಕುಲ ಒ[23]ಡನೊಡನೆ ಗುಡಿಗಟ್ಟಿ ಬರುತಮಿರೆ
ಪುರಜನಂ ಪರಿಜನಂ [24]ಬೆಱಗಾಗಿ ನೋಡುತಿರೆ[24]

---

1 ಬರೆವರಲ್ (ಕ) 2 ಕ್ಕೆ (ಕ) 3 ತಂತಿರಲ್ (ಕ) 4 ಕ್ಷಿ (ಚಪ) 5 ರುಶ (ಚಪ) 6 ತಂ (ಚಪ) 7 ಡನೆ ಪರುಷ (ಚಪ) 8 ತಂ (ಚಪ) 9 ಸತ್ (ಚಪ) 10 ಅಕ್ಕರಿಂದಚಲ (ಚಪ) 11 ನು (ಕ) 12 ತಮಂ (ಕ) 13 ತಂ (ಚಪ) 14 ಇಂದುಧರನಾಜ್ಞೆಯಿಂ ನಿಂದು ಬಿನ್ನೈಸುತಂ (ಚಪ) 15 ದೇವನೀ ನಡೆಯಿಸಲು ನಡೆವೆನೆಲೆ ಶಂಕರಾ (ಚ) 16 ದೇವನೀ ನೆನೆಯಿಸಲ್ ನೆನೆವೆನೆಲೆಪುರಹರ (ಚ) 17 ಮ್ಮ (ಚಪ) 18 ಕಾಪು (ಚ) ರೂಪು (ಪ) 19 ನ್ನವಿ (ಕ) 20 ತಂ (ಚಪ) 21 ಕಡೆ (ಚಪ) 22 ಶಂಕರನ ಪುರಹರನ ಹರಮ (ಚ) ಪುರಹರನ ಶಶಿಧರನ ಹರಮ (ಚ) 23 ಕುಲದೊ (ಚ) ತತಿಯೊ (ಪ) 24 ನೋಡಿ ಬೆಱಗಾಗುತಿರೆ (ಪ)

ಪರದೈವ ಸಂತಾನತಿಮಿರಭಾಸ್ಕರನೆಂ[1]ದು[1]
ಪರಸಮಯ ವಿಪಿನಕುಲದಾವಪಾವಕನೆಂ[2]ದು[2]
ಬಿರುದೆತ್ತಿ ಕಹಳೆಗಳ್ ದೆಸೆದೆಸೆಗೆ ಕರೆವುತಿರೆ
ಉರವಣಿಸಿ ನಡೆತಂದನಪ್ರತಿಮನೊಪ್ಪುತಿರೆ
ಬಂದು ಬಾಹೂರನತಿಸಂಭ್ರಮದೊಳಂ ಪೊಕ್ಕು
ಸಂದಣಿಪ ಗಣಪದದ ರಜದಿಂ ಮನಂಮಿಕ್ಕು
ಶರಣರಂ ನೋಡು[3]ತುಂ[3] ನಲಿದು ಕೊಂಡಾಡು[3]ತುಂ[3]
ಹರುಷದಿಂ [4]ಕೂಡುತುಂ[4] ಶಿವನೊಳೋಲಾಡು[5]ತುಂ[5]
ಪರಮಸುಖವೇಱು[6]ತುಂ[6] ಪುಳಕಮಂ [7]ಹರಹುತುಂ[7]
ಕರುಣ[8]ಮಂ[8] ತೋಱು[9]ತುಂ[9] ತೃಪ್ತಿಯಂ ಬೀಱು[9]ತುಂ[9]
ಶರಣತತಿ ಹಾರೈ[10]ಸೆ[10] ಶಿವಭಕ್ತಿ ತೇರೈ[10]ಸೆ[10]
ಹರಭಕ್ತಿ ಪೂರೈ[10]ಸೆ[10] ಪರಮಸುಖ ಕೋರೈ[10]ಸೆ[10]
ಎಸೆದಿರ್ದನಮ್ಮಮ್ಮ ಬಾಹೂರ ಬೊಮ್ಮಯ್ಯ
[11]ಅಸಮನಯನನ ಸುತಂ[11] ಬಾಹೂರ ಬೊಮ್ಮಯ್ಯ
[12]ಅ[12]ರರೆ ಕಲಿ ಬಾಹೂರ ಬೊಮ್ಮಯ್ಯನೆಮ್ಮಯ್ಯ
ಶರಣಜನ ಸಂತೋಷಿ ಬಾಹೂರ ಬೊಮ್ಮಯ್ಯ
ಇಂತು ಸುಖದಿಂದೆ ಬಾಹೂರೊಳೊಪ್ಪುತ್ತಮಿರೆ
ಸಂತತಂ ಶರಣತತಿ[13]ಯುರ್ಬಿ ಪೊಗಳುತ್ತ[13]ಮಿರೆ

---

1 ಬ (ಪ) 2 ಬ (ಪ) 3 ತಂ (ಚಪ) 4 ಮಾಡುತಂ (ಚಪ) 5 ತಂ (ಚಪ) 6 ತಂ (ಚಪ) 7 ಹೇರುತಂ (ಚಪ) 8 ವಂ (ಕ) 9 ತಂ (ಚಪ) 10 ಸಿ (ಕ) 11 ನಸಮನಯನನ ಸುತಂ (ಕ) ಅಸಮಾಕ್ಷನಾ ಶರಣ (ಚ) 12 ನ (ಕ) 13 ಪೊಗಳುತ್ತಲಿರುತ (ಚ) ಪೊಗಳುತ್ತಮಿರುತ (ಪ)

# ದ್ವಿತೀಯ ಸ್ಥಲಂ

ವೃತ್ತ || ಜೋಳಂ ಶಂಕರನೆಂದಡೋಯೆನಿಸಿದ್ದೈ ಬಾಹೂರ ಬೊಮ್ಮಯ್ಯ ಭೂ
ಪಾ[1]ಲೋದ್ಯದ್ದಿ[1]ಪಸಿಂಹನೆಂದೆನಿಸಿದ್ದೈ ಬಾಹೂರ ಬೊಮ್ಮಯ್ಯ ನೀಂ
ತ್ರೈಲೋಕ[2]ಕ್ಕತಿಧೀರ[2]ನೆಂದೆನಿಸಿದ್ದೈ ಬಾಹೂ[3]ರ [3]ಬೊಮ್ಮಯ್ಯ ಕೇಳ್
ಭಾಳಾಕ್ಷಂಗೆ ಭು[4]ಜಾಸ್ಯನೆಂ[4]ದೆನಿಸಿದ್ದೈ ಬಾಹೂರ ಬೊಮ್ಮಯ್ಯನೇ

ಗದ್ಯ|| ಎಂ[5]ದೆಂದು[5] ಕೊಂಡಾಡುತಿರ್ಪ ಮಾಹೇಶ್ವರರ ನಡುವೆ ಬಾಹೂರ ಬೊಮ್ಮ[6]ಯ್ಯಂ ಸಾ[6]ಹಸಾಭರಣಂ ಗಂಗಾಧರನ [7]ಗಾಂಭೀರ್ಯ[7]ದಂತೆ ರಾಜಶೇಖರನ ತೇಜದಂತೆ ಕಪರ್ದಿಯ ಕೀರ್ತಿಯಂತೆ ಕಾಮಹರನ ಕಾ[8]ಯ್ಪಿ[8]ನಂತೆ ಪುರಹರನ [9]ಪ್ರತಾಪ[9]ದಂತೆ ಕಾಲಹರನ [10]ಲೀಲೆ[10]ಯಂತೆ ಪಂಚಮುಖನ [11]ಸಂತಾನ[11]ದಂತೆ ಕುಳ್ಳಿರ್ದು ಜೇರ್ವರಿವ ಶಿವಭಕ್ತಿಗೆಡೆಗೊಟ್ಟು ಅಂಕುರಿಪ ಶಿವಜ್ಞಾನಕ್ಕೆ ಮನಂಗೊಟ್ಟು ಪಲ್ಲವಿಪ [12]ಶಿವಸ್ನೇಹ[12]ಕಿಂಬಾಗಿ ಬಳ್ಳಿವರಿವ ನಿಷ್ಠೆಗಡರ್ಪಾಗಿ ಪುಣ್ಯದಂತೆ ಜಂಗಮಪ್ರಕರದ [13]ಸಂಗ ಸುಖಕ್ಕಂ[13] ಪಿಂಗದ ಲಿಂಗಸ್ನೇ[14]ಹಿ[14] ಮಂಗಳಾತ್ಮಕಂ ಸತ್ಯಶರಣರ ಸೂಳ್ನು[15]ಡಿ[15] ಕಿವಿಯ ಸವಿ ರೂಪು ಕಣ್ಗಳ ಕೌತುಕಂ ಸೋಂಕು ತನುಪುಳಕಂಗ[16]ಳ[16] ಪ್ರಸಾದ ಪರಿಮಳಂ ಘ್ರಾಣೋತ್ಸಾ[17]ಹಂ[17] ಶಿವಸ್ತೋತ್ರಂ ನಾಲಿಗೆಯ ರಾಜ್ಯಂ ಘನಮೂರ್ತಿ ಮನೋಹರಮಾಗಿ ಸಾತ್ವಿಕಭಕ್ತಿರಸತರಂಗಿಣೀ [18]ಪಯೋವಗಾಹಕ[18]ಚಿ[19]ತ್ತ[19] ಪ್ರಭೂತ ೧೮ ಪ್ರಮೋದಗಾತ್ರ[20]ನಾ[20]ಗಿ ಕೆಲವುದಿನ ಒಲ[21]ವಿನಿಂ[21]ದಿರ್ಪಲ್ಲಿ ಪನ್ನಗಧರಂ ನಿನ್ನಂ ಮೆಚ್ಚಿ ದಪಂ ಬನ್ನಿ[22]ಮೆಂದತ್ಯಾದರದಿಂ[22] ಕರೆದಂತೆ ಸೋಮವಾರಂಬರೆ ಸುಪ್ರಭಾತ ಸಮಯದೊ[23]ಳೆಳ್ದು[23] ಭ[24]ಸ್ಮೋ[24]ದ್ಧೂಳಿತಾವಯವನುಂ ರುದ್ರಾ[25]ಕ್ಷತಾ[25]ಲಿಂಗಿತ ಸರ್ವಾಂಗನುಂ ಧವಳಾಂಬರಪರಿಪಸನನುಂ ನಿರ್ಮಳೋತ್ತರೀಯ ವಿಶೇಷನುಂ [26]ನ[26]ವ್ಯಾಭರ[27]ಣ ಭೂಷಣನುಂ[27] ಹಸ್ತಪ್ರಬದ್ಧ ತಾಳಯುಗಳನುಂ ಅವಯವಾಭ್ಯಾಸಾಲಿಂಗಿತಸರ್ವಾಂಗನುಂ

---

1 ಲೋದ್ಯದ್ವಿಭ (ಚ) ಳೊನ್ಮದ್ದಿಭ (ಪ) 2 ಕಧಿಕತ್ವ (ಚಪ) 3 ರು (ಕ) 4 ಜಪ್ರತಾಪಸೇವೆಯೆಂ (ಕ) 5 ದು (ಚ) 6 ಯ್ಯಸ (ಕ) 7 ಗಂಭೀರ (ಕಚ) 8 ಪಿ (ಕ) 9 ಪುಣ್ಯ 10 ನೆಲೆ (ಕ) 11 ಪ್ರಪಂಚ (ಕ) 12 ಸ್ನೇಹ (ಕ) 13 ಸಂಗಡ ಸುಖಂ (ಚಪ) 14 ಹ (ಕ) 15 ಡಿಯ (ಕ) 16 ಳೆ (ಕ) 17 ಹಿ (ಚಪ) 18 ಸಮಾನುರಾಗ (ಚಪ) 19 ತ್ತನುಂ (ಕ) 20 ಚಿತ್ತನಾ (ಚಪ) 21 ವಿಂದಿ (ಕ) 22 ಮೆಂದು ಕರೆವಂತಾದರದಿಂದಂ (ಕ) ಮೆಂದತ್ಯಾದರದಿಂ ಕರೆದಂತೆ (ಪ) 23 ಳು (ಕ) ಳ್ (ಚ) 24 ಸಿತೋ (ಚ) 25 ಕ್ಷೆಯಮಾಲಾ (ಚ) ಕ್ಷಮಾಲಾ (ಪ) 26 ಭೂಷಿತನ (ಕ) 27 ಣ ನುಂ (ಕ)

ಉಭಯಪಕ್ಷವಿಳಸಿತಪದಾತಿಬಲನುಂ ಪರಿವೃತಶಿವಭಕ್ತ ಪ್ರಕರನುಂ ತ್ರಿಪುರಾಂತ[1]ಕ[1] ಶ್ರೀ ಪಾದಪದ್ಮಾವಲೋಕನಾಸಕ್ತಚಿತ್ತ[2]ನುಮಾ[2]ಗಿ ಗಜಾಸುರ ವಿಜಯಕ್ಕೆ ಪೊಱಮಡುವ ರುದ್ರನಂತೆ ಬಾಹೂರಂ ಪೊಱಮಟ್ಟು ಕಿಱುವಂತರಮುಮಂ ನಡೆತಂದು ಕಲ್ಯಾಣಮಂ ಪೊಕ್ಕು ರಾಜಬೀದಿಯೊಳ್ ನಡೆತಪ್ಪಾಗಳ್ ಮುಂದೆ ಪೆರ್ಮಾಡಿರಾಯನ ಪಟ್ಟದಾನೆ [3]ಸಂಚಿತ ತಿಳಕಿತ ಅರ್ಧಕಪೋಳಿತ ಅತಿವರ್ತಿತ ಅಧೋನುಬಂಧಿನಿ ಕ್ರೋಧಿನಿ ಗಂಧಚಾರಿಣಿ ಎಂಬ ಸಪ್ತಾವಸ್ಥೆಯ ಮದದಿಂ[3] ಮುಂದುಗಾಣದೆ ಕರ್ಣತಟದಿಂಮೊಱತೊಗುವ ಮದಗಂಧಕ್ಕೆಳಸಿ [4]ಬಂದ[4]ಳಿಕುಳಂ ಕಱುಮುಱುವೋಗಿ [5]ಬೀಳಲ[5]ಗ್ರಪಲ್ಲವದಿಂ ಪೊಯ್ದು ಕೊಳು[6]ತುಂ[6] ಮದಜಲಮನುಗುಳ್ವ ಕಡುಸು[7]ಯ್ಲ[7] ಬಳಿವಿಡಿದು ಪಸರಿಸಿ ಪೊಱಮಟ್ಟ [8]ಶೀಕರನಿ[8]ಕರಂ ವಡಬಾನಳ[9]ನ ವಿಸ್ಫುಲಿಂಗ[9]ದಂತೆ ಸೋಂಕಿ[10]ದುದೆ[10]ಲ್ಲವಂ ಭುಗಿಲನುರು[11]ಪೆ[11] ಪುಷ್ಕರಾಗ್ರದಿಂ ಪೂತ್ಕರಿಸು[12]ತುಂ[12] ಕೈಕೊಂಡ ರೂಪಂ ಕೋಡೊಳಿಟ್ಟೀ ತೆಱದೊ[13]ಳೊರಸುವೆ[13]ನೆಂಬುದಂ ತೋರ್ಪಂತೆ ಕೊಂಬಿನ ಮೊನೆಯೊ[14]ಳ್ಬ[14]ರಿಕಯ್ಯಂ ಹೇಱು ತೂಗಾಡುತುಂ ತನ್ನ ನೆಳಲಂ ಪ್ರತಿದಂತಿಯೆಂದು [15]ಕುಱು[15]ತ್ತೆಱಗಿ ನಾಡೆನೀಡಿ ನಟ್ಟದಾಡೆಯಿಂ ಬೆಟ್ಟದ ತೋರ[16]ದ ಪೆಟ್ಟಿಗಳನೆ[16]ತ್ತಿ ನಿಟ್ಟೆಸಿ ನೋಡು[17]ತುಂ[17] ಕಾಲೊಳ್ ಬಂಧಿಸಿದ ಮಾಲೆಯ ಸಿಗಳಂಗ[18]ಳು ಘುಲಘುಲಿಪೆ[18] ಜಾ[19]ಣಂ ಸೆಳೆ[19]ದುಣ್ಮೆ ಪೊ[20]ಣ್ಮೆ[20] ಘಳಿ[21]ಲೆಂದು ವಿಸಟಂಬರಿದು ಕಂಪಿಸಿ ನಿಟ್ಟಾಲಿಗೊಂಡು[21] ಪರಿದು [22]ಬಂದು ಪಿ[22]ರಿಯ ಕರುಮಾಡಮಂ ಮದದ ಜೆಂಕೆಯಿಂ [23]ಹೊ[23]ತ್ತಿ ಹೊಗೆ[24]ಯೆ[24] [25]ಮ[25]ನ್ನಣೆಯ [26]ಮುಂದಿವಾ[26]ಳಕ್ಕೆ ಮುಂದಡಿ[27]ಯಿ[27]ಟ್ಟು ದನಿದೋಱುವ ಜೋದ[28]ರಂ[28] ಬರಲಿತ್ತು ಭೋಂಕನೆ ಪಿಡಿದು ಹಸ್ತದೊಳೆತ್ತಿ ಪ್ರತಿಮಾನದೊಳ್ ದೊಪ್ಪುಧೊಪ್ಪೆನಲ್ ಪೊಯ್ದಿಟ್ಟಣೆಸಿ [29]ತಲೆಯಲೊಟ್ಟಿಕೊಳುತ್ತಂ[29] ಸಿಡಿದೊಱಲುತೋಡಿದವನನಱಿಕಿಯಟ್ಟಿ ಸೀ[30]ಳುತಂ[30] ಅಳವಿಗೆ ಬಂದಾರೆಕಾಱರನಱಿಕಿದು ಸಣ್ಣಿಸು[31]ತುಂ[31] ಮುಂಡಿಸಿ ತೊನೆ[32]ಯುತುಂ[32] ಅಡ್ಡನಿಲು[33]ತುಂ[33] ವಿಸಟಂಬರಿ[34]ಯುತುಂ[34] ತೋಱು ತ[35]ಪ್ಪುತಪ್ಪ[35]ಳಿಸಿ ನಿಲು[36]ತುಂ[36] ಮಸಗಿಮೊರೆ[37]ಯುತುಂ[37] ಸುತ್ತಿ ಕೆಕ್ಕಳಿಸು[38]ತುಂ[38]ಹೊತ್ತಿ ಹೊಗೆ[39]ಯುತುಂ[39] [40]ಉರಿವಱುವ[40]

---

[1] ಕ ಪ್ರಭುವ (ಜ) [2] ನಾ (ಜಪ) [3] ಸಪ್ತಮದಾವಸ್ಥೆಯಿಂ (ಜಪ) [4] ದಂತ (ಜ) [5] ಅ (ಜಪ) [6] ತ್ತಂ (ಜಪ) [7] ಯ್ಯಲ (ಕ) [8] ಸೀಕರಾನೀ (ಜ) ಸೀಕರನಿ (ಪ [9] ಸ್ಫುಲ್ಲಿಂಗ ಕುಳ (ಕ) [10] ದೆಡೆಯೆ (ಕ) [11] ಪಿ (ಕ) [12] ತ್ತಂ (ಜಪ) [13] ಳಱಿಕಿವೆ (ಜಪ) [14] ಳುಂಬ (ಜಪ) [15] ಕಟ್ಟು (ಜಪ) [16] ಪೊಟೆಯುಂ ಎ (ಜಪ) [17] ತಂ (ಜಪ) [18] ಳಂ ಘುಲಿ ಘುಲಿಸೆ (ಕ) ಳಂ ಘುಲ ಘುಲಿಸಿ (ಜ) [19] ರಸಿದ (ಕ) [20] ಣ್ಮೆಪುಣ್ಮೆ (ಕ) [21] ಲನೆಕಂಪಿಸಿ ನಿಟ್ಟೋಡಿಯಾದಿಗೊಂಡು (ಜಪ) [22] ಪಿ (ಜಪ) [23] ಡೊ (ಜ) [24] ಯೇಱು (ಜಪ) [25] ತಿಂತ್ರೆಗಾಱದೆ ತೇದುಕೊಡುತುಂ ಮ (ಕ) [26] ಮದ್ದಾ (ಜ) [27] ಯುನಿ (ಜಪ) [28] ನಂ (ಕ) [29] ಕೋಡುವೊನೊಯೊಟ್ಟಿಕೊಳುತಂ (ಕ) [30] ಳ್ವಂ (ಕ) [31] ತ್ತಂ (ಜ) [32] ಯುತ್ತಂ (ಜ) ವುತ್ತಂ(ಪ) [33] ತ್ತಂ (ಜ) [34] ವುತಂ (ಜಪ) [35] ಟ್ಟುತಪ್ಪ (ಜಪ) [36] ತಂ (ಜಪ) [37] ವುತಂ (ಜಪ) [38] ತಂ (ಜಪ) [39] ವುತಂ (ಪ) [40] ಮುರಿವರಿವುತಂ (ಜಪ)

ಮಥನದ ಕಾಳಕೂಟಂ ಕುಂಜರಪತಿಯ ರೂಪುಗೊಂಡಂ[1]ತೆ ಉ[1]ರವಣಿಸಿ ಬರ್ಪ ಸಿಂಧುರದ ಮುಂದೆ ಮಂದಿಗೊಡುವ ಡವುಡೆಕಾಱರು ಚೂಣಿಯ ಪಡಿಯಜರ್ ತೊಲತೊಲಗು [2]ಮಾರಿಯ ಮೂರಿಗಿದಿರಾರು ಸಾ[2]ರು ಸಾರೆಂದಿಟ್ಟಣಿಸಿ ಮುಟ್ಟಿಬಂದ ಕಳಕಳಮಂ ಕಟ್ಟಿದಿರೊಳ್ ಕೇಳ್ದು ಅಮ್ಮಮ್ಮ ಮಾರಿಯ ಕೊರಸಿ ದಿಟ್ಟನೂಱಿನ ಕಟ್ಟಿದಲಗು ಪಶುಪತಿಯ ಪಾಶುಪತಾಸ್ತ್ರವೆನಿ[3]ಪ[3] ಬಾಹೂರಬೊಮ್ಮಯ್ಯಂ ಸಿಂಹವಿಕ್ರಮಂ ಗಜಾಸುರಾಂತಕ ಕುಮರಂ ಕೆಲಬಲದ ಮಾಹೇಶ್ವರರನಂಜದಿರಂಜದಿರೆಂದೊಂದೆಱಡಿಯನಿದಿರಾಗಿ ನಡೆದು ಜಡಿದು ನುಡಿದು ಸಡಿಫಡ ಸಾವನನ ಮನೆಯಾನೆಗೆ ಶಾಶ್ವತನ ಮನೆಯಾನೆ ತೊಲಗುವುದಲ್ಲ ತೆಗೆತೆಗೆ ನಿಲ್ಲು ನಿಲ್ಲಿತ್ತ ಬಾರದಿರೆನ್ನಾಣೆಯೆಂದೆತ್ತಿದ ಹಸ್ತನಿವಾರಣೆ[4]ಯಿಂ[4] ಹೂಂಕರಿಸಿ[5][5] ನಡೆತರ್ಪ ಮದದಾನೆ ಭೋಂಕನೆ ನಿಂದು ತಾಳವಟ್ಟಮಂ ತೂಗದೊಡಲನೊಳೆಯು[6]ವೆ ಅ[6]ಗ್ರಪಲ್ಲವನನಲುಗಸೆ ಸುಂ[7]ಡಿ[7]ಲಂ ಭಂಡಾರಿಸಿ ಕೀಲಿಸಿದಂತೆ [8]ಕಂಡರಿಸಿದಂತೆ ಕೆ[8]ರುವಿಟ್ಟಂತೆ [9]ನಟ್ಟನಿಂದೊಡಾರೆಕಾಜಿ[9]ರಿಱಿಸೊ[10]ಡಂ[10] ಮಾ[11]ವಂತರಾದೊರ್[11]ಡಂ ನೆರೆದ ನೆರವಿ ಬೊಬ್ಬಿಟ್ಟೊಡು ಮಣ್ಣಾನೆಯಂತೆ ಮಿಡುಕದಿ[12]ರೆ[12] ಕಂಡುಕಂಡು ಭಯಗೊಂಡು ನೋಡುತಿರ್ಪ ಪಸಾಯಿತರ್ ಪರಿದು ಬಂದರಸಂಗೆ ಮೆಯ್ಯಿಕ್ಕಿ ನಿಂದು

ಎಲೆ ದೇವಾ ನಮ್ಮ ಪಟ್ಟದಾನೆ ಮದಂಗೊಂಡು ಸೂರ್ಯವೀಥಿಯೊಳಟ್ಟ[13]ತ್ತುಂ[13] ತುಳಿಯುತ್ತುಂ ಬರ್ಪಲ್ಲಿ ಬಾಹೂರಬೊಮ್ಮಯ್ಯನೆಂದೆಂಬ ಹರಭಕ್ತಂ ತೊಲಗದಂಜದ್ದೆ ತಂದು ಸಾವನ[14]ನ ಮನೆಯಾ[14]ನೆಗೆ ಶಾಶ್ವತ[15]ನ ಮನೆಯಾ[15]ನೆ ಓಸರಿಸುವುದ[16]ಲ್ಲ ನಿಲ್ಲೆಂ[16]ದಾಜ್ಞಾಪಿಸೆ ಮತ್ತಗಜವ[17]ತ್ತಿತ್ತ[17] ಮಿಸುಕದೆ ನಿಂದಿ[18]ರ್ದಪು[18]ದೆಂದು ಬಿನ್ನವಿಸಿದ ಬಿನ್ನಪಮೊಡನೆ ಪೆ[19]ರ್ಮಾ[19]ಡಿರಾಯನಿರ್ದ ಪರಿಯೊಳೆ[20]ಳ್ದು ನಾ[20]ಲ್ಕಡಿಯೊಳೈತಂದು ಮುಂದಿದಿರ್ದಾನೆಯುಮಂ ಕಟ್ಟಿದಿರೊಳಿರ್ದ ಬೊಮ್ಮಯ್ಯಗಳುಮಂ ಕಂ[21]ಡು ಎ[21]ಲೆ ಭಕ್ತ [22]ನೀಂ[22] ಶಾಶ್ವತನ ಮನೆಯಾನೆಯಾದೊ[23]ಡೇಂ ಎ[23]ನ್ನಾನೆಯೊಡನೆ ಕೈಯಿಕ್ಕಿ ಗೆ[24]ಲ್ದ ದುಚಿತವದ[24]ಲ್ಲದೆ ಮಂತ್ರದಿಂ [25]ಮಾಯದಿಂ ಗ[25]ತಿಸ್ತಂಭ[26]ನಂ ಮಾಡಿದೊಡೆ[26] ಕುಟಿಲ[27]ವೆನಿಸುವು[27]ದಲ್ಲದೆ [28]ಪರಾಕ್ರಮವಲ್ಲೆಂದು[28] ನುಡಿದ ಭೂಪತಿಯ ಮೊಗಮಂ ನೋಡಿ ಮುಗುಳ್ನಗೆ ನಗು[29]ತ್ತುಂ[29] ಧೈರ್ಯನಿಧಿ ಮಾಯಾಮದಹರಣಂ ಬಾಹೂರಬೊಮ್ಮಯ್ಯ[30]ನರಸನಂ ನೋಡಿ ನುಡಿದಂ[30] ಕೇಳೆಲೆ ಶರಣರ ಪುರುಳನಱಿಯದರಸು ಮರು[31]ಳೆ[31] ಗಣ

---

1 ತು (ಜಪ) 2 ಸಾ (ಜಪ) 3 ಸಿ (ಜಪ) 4 ಯಿಂದಂ (ಜಪ) 5 ಸೆ (ಕಜ) 6 ದ (ಜಪ) 7 ಡ (ಕ) 8 ಕ (ಕ) 9 ಕಟ್ಟುನಿಂದಾರೆಕಾಜಿ (ಜ) ನಟ್ಟುನಿಂದಾರೆಕಾಜಿ (ಪ) 10 ಡೆ (ಕ) 11 ಪುತರರತೆಮೊ (ಜ) ಪುತರಾದೊರ್ (ಪ) 12 ರೆ (ಜ) 13 ತ್ತಂ (ಜಪ) 14 ನಾ (ಕ) 15 ನಾ (ಕ) 16 ಲ್ಲೆಂ (ಜಪ) 17 ತ್ತಲಿತ್ತ (ಕ) 18 ರ್ಪ (ಕ) 19 ರ್ಮ (ಕ) 20 ದ್ದುಕಾ (ಜಪ) 21 ಡೆ (ಕ) 22 ನೀ (ಜ) 23 ಡೆ (ಕ) 24 ಲ್ದೆಯ (ಜಪ) 25 ಗ (ಜ) 26 ಮಂ ಮಾಳ್ಪುದಿದು (ಜಪ) 27 ಮು (ಜಪ) 28 ದಿಟಮುಲ್ತು ಇಂತೆಂದು (ಜಪ) 29 ತ್ತಂ (ಜಪ) 30 ಅರಸಂಗಿಂತೆಂದು (ಜಪ) 31 ಳ (ಜ)

ನಾಥನ ಮುಂದಿಂದ್ರನ್ಸೈರಾ[1]ವತವ[1]ಭ್ರಚ್ಛಾಯೆ ಅಗ್ನಿಯ ಪುಂಡರೀಕಂ ನೀರೊಳಗಣತಾವರೆ ಯಮನ ವಾ[2]ಹ[2]ನಂ ಮನೆಯ[3]ವಾಗಿಲಗುಜ್ಜಂ[3] ನೈರು[4]ತ[4]ನ ಕುಮುದಂ [5]ತಿಳಿಗೊಳನ ನೈದಿಲ್[5] ವರುಣನಂಜನಂ ಕ[6]ಣ್ಣ[6]ಕಾಡಿಗೆ ಪವನನ ಪುಷ್ಪ[7]ದಂತಂ[7] ಕಯ್ಯ ಪೂಮಾಲೆ ಕುಬೇರನ ಸಾರ್ವಭೌಮಂ ಮಣ್ಣಾನೆ ಧನದಮಿತ್ರನ ಸುಪ್ರತೀಕಂ ಸ್ಥಾಣು ವಶವರ್ತಿಯೆ ನಿ[8]ಪ[8] ಕಟ್ಟಬ್ಬಟ್ಟಿಯ ತೇಜದ ಘನಮಹಿಮರ ತೇಜವಪ್ಪೈನ್ನೊಡನೆ ನಿನ್ನಾನೆ ಕೈಯಿಕ್ಕುವು ದುಂಟೆ[9]ಂ[9]ಟವೇ[9]ಮಾಣ್ಬುದೆಂದಾಕ್ಷೇಪಿ[10]ಸುತ್ತುಂ[10] ತನ್ನ ಕೈಯೊಳ್ ಸಿಂಗದ [11]ಕಣ್ಗಳಂ ತ್ರಿ[11]ರ್ದ *ತಾಳಮಂ ತೆಗೆದಿವನೆತ್ತಿದೊಡೆ ನಿನ್ನಾನೆಗೆಲವೆಂದು ಧರೆಯ ಮೇಲಿರಿಸಿ ಕರಿಯ ಬಂಧನಮಂ ಬಿಟ್ಟು ಕರೆಯುಲೊಡಂ ಮತ್ತಗಜನೆಯ್ತಂದು ತುಡುಕುವಾಗಳ್ ತಾಳರಜ್ಜು ಪಾತಾಳಕ್ಕೆ ಬೇರೂಱಿ ಸಿಂಗದ ಕಣ್ಗಳಂತೊಪ್ಪುವ* ತಾಳ[12]ಮನೆ[13]ತ್ತಲಾಱದೆ ತಾಳವ [13]ಟ್ಟಂ[13] ಮೇಲಾಗಿ [14]ಘೀಳಿಟ್ಟು ಕೋಡೂಱಿ ಕೆಡೆದು ಧರಣಿಯೊಳುರುಳ್ದು ಹರಣಂಗಳೆಯೆ ಹರಭಕ್ತನ ಸಾಮರ್ಥ್ಯಮಂ ಕಂಡು ಪೆರ್ಮಾಡಿರಾಯಂಗೆ ಭೀತಿ ಪುಟ್ಟೆ ಅದ್ಭುತಂ ತಲೆ ದೋಱಿ ಕೌತುಕಮುದಯ್ಸಿ ಅಚ್ಚರಿಮಿಕ್ಕು[14] ಸತ್ಯಶರಣನ ಚರಣದೊ[15]ಳ್[1] ಧೊಪ್ಪನೆ ಬಿಳ್ದು ದೇ[16]ವದೇವಾ[16] ಮಾತಱಿಯದ ಮೂರ್ಖಂಗೆ ಭಕ್ತಿಯಱಿಯದ ಯುಕ್ತಿಹೀನಂಗೆ ನಿಸ್ಸೀಮರನಱಿಯದ ನಿ[17]ರ್ದೈವಂಗೆ[17] ಸಿರಿಮರುಳ್ಪತ್ತಿದ ನಿರ್ಭಾಗ್ಯಂ[18]ಗೆನಗೆ[18] ಕರುಣಿಪು ದೆಂದು ಕಾರ್ಪಣ್ಯಮುಖನಾಗಿರ್ದ ಧರಣೀಶನಂ ಶರಣರನುಮ[19]ತದಿಂ[19] ಕರುಣಿಸಿನೋಡಿ ಸತ್ತಾನೆಗಾಯು[20]ಮನಿ[20]ತ್ತು ತಾಳಮಂ ತನ್ನತ್ತ [21]ಕರೆ[21]ದುಕೊಂಡು ಶಶಿಧರನ ಬಿ[22]ಸು[22] ಗಣ್ಣ [23]ವಿ[23]ಭನಂ [24]ರುದ್ರನ[24] ಭದ್ರಗಜಂ ಶಂಕರ[25]ಸಂಕದ ಕೇಸರಿಯೆ[25]ನಿಪ ಬಾಹೂರ ಬೊಮ್ಮಯ್ಯನಂ ಪೆ[26]ರ್ಮಾ[26]ಡಿರಾಯನೋ[27]ಲೈ[27]ಸಿ ಬರೆ ಪುರಜನಂ ಕಯ್ಯೆ[28]ತ್ತಿ[28] [29]ಶರಣರ್ ಪತಕೆಗಳಂ ನೀಡೆ ಪ[29]ರಸನು ಯಂ ಪರಿದೋಡೆ ರಭಸದಿಂ ನಡೆತಂದು ಕಪಟ ರಹಿತಂ ತ್ರಿಪುರಾಂತಕನಂ [30]ನಲಿದು ಬ[30]ಲವಂದು [31]ಚಿತ್ತಂಗೊಂಡು ಕಂಡು[31] ಮನಂ ಮುಟ್ಟೆ ಭಾ[32]ವಂ[32] ಒಲಿದು ಪಾದೋದಕಂಗೊಂಡು ಪುಣ್ಯಂ [33]ಪರಿಮಳಿ[33]ಸಿ ಪ್ರಸಾ ದಮಂ ಧರಿಸಿ ನಿತ್ಯನೇಮಂ ಮಾಡಿ ಸತ್ಯಸೇವ್ಯನಂ ಬೀಳ್ಕೊಂಡು ಕಲ್ಯಾಣಪುರಮಂ ಪೊಱ ಮಟ್ಟು ಪೆ[34]ರ್ಮಾ[34]ಡಿರಾಯನಂ ಮರಳಿ ಕಳು[35]ಪಿ[35] ಬಾಹೂರತ್ತಲಭಿಮುಖನಾಗಿ

---

1 ತಂ ಅ (ಚಪ) 2 ವ (ಕ) 3 ಮಹಿಷಂ (ಚಪ) 4 ತ್ಯ (ಚಪ) 5 ನೀಲೋತ್ಪ ಲಂ (ಚಪ) 6 ಣ್ಣನ (ಕ) 7 ದತ್ತಂ (ಚಪ) 8 ಪ್ರವ್ರ (ಚ) 9 ಟೀಕೆ (ಕ) ಟವೇ (ಚ) 10 ಸಿ ನುಡಿದು (ಚಪ) 11 ಕಂಗಳಂ ಆ(ಚಪ) 12 ಮಂ ಕೋಡಲೆ (ಚಪ) 13 ಟ್ಟಲಂ (ಚಪ) 14 ಘೋಳಿಟ್ಟು ಕಾಲೂರಿ ಧರಣಿಯ ಮೇಲೆ ಕೆಡೆಯಲಾಶ್ಚರ್ಯಂ ಬಟ್ಟು (ಚಪ) 15 ಳು (ಕ) 16 ವಾ (ಚಪ) 17 ರ್ದೇಸಂ (ಚಪ) 18 ಗೆ (ಚಪ) 19 ತಿಯಿಂ (ಕ) 20 ಮಂ ಇ (ಚಪ) 21 ತೆಗೆ (ಚಪ) 22 ಸಿ ಚಪ) 23 ಅಭವನ ವಿ (ಕ) 24 ದಾಂದ್ರವಿದ್ರಾವಣನ (ಚಪ) 25 ಬಿಂಕದ ಭಕ್ತಿಯ ಭಾವುಕನೆ (ಚಪ) 26 ರ್ಮ (ಚ) 27 ಲಗಿ (ಕ) 27 ತ್ತಿ (ಕ) 28 ಪ (ಚಪ) 29 ಬ (ಚಪ) 30 ಕಂಡು ಚಿತ್ತಂ ಸಂತಸಂಗೊಂಡು (ಚಪ) 31 ಗ್ಯಂ (ಕ) 23 ನೆಲ (ಚಪ) 33 ರ್ಮ (ಕ) 34 ಪೆ (ಪ)

*—* ಈ ಭಾಗ ಚ ಮತ್ತು ಪ ಪ್ರತಿಗಳಲ್ಲಿ ಇಲ್ಲ.

ಪದಾತಿ ಬಲಂ ಪಡಿಸ[1]ಲಿ[1]ಸೆ ನಿಸ್ಸಾಳಧ್ವನಿಯುಣ್ಮೆ ಕಹಳಾರವಂ ಪೊಣ್ಮೆ [2]ಕಡುನಿಷ್ಠೆ ಕೈಗಣ್ಮೆ ಮನಂ ಮಿಕ್ಕು ಬಾ[2]ಹೂರಂ ಪೊಕ್ಕು [3]ಪ[3]ರಮಸುಖ[4][ದಿಂ][4] ಬೊಮ್ಮಯ್ಯ [5]ತಂದೆಗಳಿರೆ[5] ಜೋ[6]ಳಂ[6] ಶಂಕರ[7]ನೆಂದೊ[7]ಡೋಯೆನಿ[8]ಸಿ[8] ಪೆರ್ಮಾಡಿರಾಯನ ಪಟ್ಟದಾನೆಗೆ ತೊಲಗದೆ ಕರಿಗೆ ಹರ[9]ಣಂಗೊ[9]ಟ್ಟನೆಂಬ [10]ಪುಣ್ಯ[10]ಕೀರ್ತಿ ಜಗಮಂ ಸುತ್ತಿ[11]ವ್ರುತ್ತೆ[11] ಕೇ[12]ಳ್ದ[12] ಶರಣರ್ ತನುತಮಗೆ ಜಂಗಮವಾರ್ಧಿ ಮೇರೆದಪ್ಪಿದಂತೆ ಕವಿತರೆ ಕಂಡು ಹರುಷಂಗೊಂಡು ಬಂದ ಶರಣರನಿದಿರ್ಗೊಂಡು ಅತ್ಯಾದರದಿಂ ಮಿಗಿಲನಾರಾಧಿಸಿ ಬಾಹೂರ ಬೊಮ್ಮಯ್ಯಂ ಶಿವಭಕ್ತ ಪ್ರೇಮಾವಳೋಕನ ನವ್ಯಕೋಶ ಹೃತ್ಕಮಳ ಸಂಸ್ಪರ್ಶ ಶಿ[13]ವಾ[13]ಸನ್ನೋತ್ಪನ್ನ ಸುಖಜಲಭರಿತಾ[14]ಕ್ಷಿ[14] ಪುಟ ಗದ್ಗ[15]ದಾಯಮಾನ[15] ಶಿಥಿಲಾಕ್ಷರ ವಚೋವಿಳಾ[16]ಸಂ[16] ಪುಳಕಾಭರ[17]ಣ[17] ಸರ್ವಾಂಗ[18]ನಾ[18]ಗುತ್ತಮಿರೆಯಿರೆ.

---

[1] ಣಿ (ಚಪ) [2] ಬಾ (ಚಪ) [3] ಮನಂಮಿಕ್ಕುಪ (ಚಪ) [4] ಮಂ (ಕ) ದಿಂದಿರೆ (ಪ) [5] ನುಂ (ಚಪ) [6] ಳವಂ (ಚಪ) [7] ನೆನಿಸಿದ (ಕ) [8] ಸಿದ (ಚಪ) [9] ಮಂ ಕೊ (ಚಪ) [10] ಸು (ಚಪ) [11] ತ್ತೆ (ಚಪ) [12] ಳ್ದ (ಚ) [13] ವದಾ (ಚಪ) [14] ಕ್ಷ (ಚಪ) [15] ದ ಮಯಂ (ಚಪ) [16] ಸ (ಚಪ) [17] ಣಂ (ಚ) [18] ನಾ (ಕ)

# ತೃತೀಯ ಸ್ಥಲಂ

ವೃತ್ತ॥ ಗಿರಿಜಾವಲ್ಲಭನ[1]ಕ್ಕ[1]ಱಿಂ ಕರೆದಪಂ ಕೈಲಾಸ ಶೈಲಕ್ಕೆ ನೀ
ನಿರವೇಳೆಂದ[2]ಱು[2]ಪಲ್ಕೆ ಬರ್ಪ ತೆಱದಿಂ [3]ತಾರೋ[3]ದಯಂ ಮುಂಬರಲ್
ಪರದೈವಾಭ್ರಮಹಾಬಲಂ ಬಲಯುತಂ ಬಾಹೂರಬೊಮ್ಮಯ್ಯನಾ
ದರದಿಂದಂ ನಲವೇಱಿ ಮೀಱಿ ಪೊಱಮಟ್ಟಂ ಶೈವಸಾರೋದಯಂ

ರಗಳೆ॥ ಇಂತು ಪೊಱಮ[4]ಟ್ಟು[4] ಶಿವಭಕ್ತರೊ[5]ಳು[5] ನುಡಿಯು[6]ತುಂ[6]
ಕಂತುಮದಮರ್ದನನ ಕರುಣಮಂ ಪಡೆ[7]ಯುತುಂ[7]
[8]ಹಾಡುತೆ[8] ಪುರಾತನರ ಗೀತದೊಳ್ [9]ಕರಗುತುಂ[9]
ಆಡು[10]ತ[10] ಗಣಂಗಳೊಡನೊಡನೆ ಪುಟನೇಳು[11]ತುಂ[11]
ಶರಣರಂ ಸೋಂಕಿ ಪುಳಕಿತಗಾತ್ರನಾಗು[11]ತುಂ[11]
ಪರಮಸುಖ ಸಂಪತ್ತಿಯಿಂ ತೇಗಿ [12]ಬೀಗುತುಂ[12]
ನಡೆತಂದು ಕಲ್ಯಾಣಪುರದ [13]ಪೊಱವ[13]ನದೊಳಗೆ
ಮೃಡನ ಸುತನಾನಂದದಿಂ[14]ದ[14] ಬರುತಿರಲೊಳಗೆ
ರವಿಯಸ್ತಗಿರಿಯ ಮೇಲತಿನಿರ್ಮಳಾಂಗದಿಂ
[15]ತವತವಗೆ ರವಿಕಿರಣ ಉಡುಗುತಿರೆ[15] ತವಕದಿಂ
ಆಗಳಾ [16]ವ[16]ನದೊಳಗೆ ಮುಗಿವ ನಳಿನಂಗ[17]ಳಂ[17]
ರಾಗದಿಂದಲರ್ವ ನವ[18]ಕುಮುದ[18]ಷಂಡಂಗ[19]ಳಂ[19]
ಸೊಗಯಿಸುವ ಗಗನ[20]ಮನ[20]ಗಲ್ದ [21]ಪೊಣ[21]ರ್ವಕ್ಕಿಯಂ
ಅಗಲದಂತೊಪ್ಪುವ ಚಕೋರಕುಲದಿಕ್ಕೆ[22]ಯಂ[22]
ಉದಯಿಸುವ ಪೂರ್ಣಶಶಿಬಿಂಬ ಸಂಪತ್ತಿಯಂ
ಒದವಿ ತೀವುವ ಚಂದ್ರಿಕಾಮಧುರ ವೃತ್ತಿಯಂ

---

1 ಕ್ಕ (ಚ) 2 ಠಿ (ಕ) 3 ಸೂರ್ಯೋ (ಚಪ) 4 ಟ್ಟ (ಕ) 5 ಳ್ (ಪ) 6 ತಂ (ಪ) 7 ವುತಂ (ಚ) ಯುತಂ (ಪ) 8 ಪಾಡುತ (ಚ) 9 ಬಾಳುತಂ (ಚಪ) 10 ವ (ಚಪ) 11 ತ (ಚ) ತಂ (ಪ) 12 ಬಾಗುತ (ಚ) ಬಾಗುತಂ (ಪ) 13 ಹೊರಬ (ಪ) 14 ದೆ (ಕ) 15 ಕಿರಣವುಡುಗುತಿರೆ ತವತವಗೆ (ಕ) 16 ಬ (ಕಚ) 17 ಳುಂ (ಚ) 18 ಕುಸುಮ (ಪ) 19 ಳುಂ (ಚ) ಳಿಂ (ಪ) 20 ದಿಂದ (ಚಪ) 21 ಕೊಳ (ಚ) 22 ಯಿಂ (ಚ)

ನೋಡು[1]ತುಂ[1] ಕಲ್ಯಾಣಪುರವನೊಲವಿಂ ಪೊಕ್ಕು
[2]ನೋಡೆ ನಿಂದಿರ್ದ[2] ಪುರವೀಥಿಗೆ ಮನಂಮಿಕ್ಕು
ಬರುತಿರ್ದ[3]ನತ್ತಲಿತ್ತಲ್[3] ಶಿವಾಲಯದೊಳಗೆ
[4]ಅ[4]ರರೆ ತ್ರಿಪುರಾಂತಕಪ್ರಭುವಿನೋಲಗದೊಳಗೆ
ಶಿವಭಕ್ತ ಸಂತಾನ[5]ವಿ[5]ರಲೊಂದು ದೆಸೆಯಲ್ಲಿ
ಕವಿ ಗಮಕಿ ವಾದಿ ವಾಗ್ಮಿಗಳೊಂದು ದೆಸೆಯಲ್ಲಿ
ಸರಸಗಾಯಕರ ಪಂಕ್ತಿಗಳೊಂದು ದೆಸೆಯಲ್ಲಿ
ನೆರೆದರಸು ಮಕ್ಕಳೋಲಗವೊಂ[6]ದು ದೆ[6]ಸೆಯಲ್ಲಿ
[7]ಮುಗ್ಧೆ ಮಧ್ಯ ಪ್ರಗಲ್ಭೆಯರೊಪ್ಪಿ[7] ಕುಳ್ಳಿರ[8]ಲ್[8]
[9]ಸ್ನಿಗ್ಧ[9] ಸಾಹಿತ್ಯಜನವ[10]ಲ್ಲಲ್ಲಿ[10] ಕುಳ್ಳಿರ[11]ಲ್[11]
ಬಲ್ಲಿದ[12]ರ್ ಬೆ[12]ವಹಾರಿಗಳ ತಂಡವಿರಲಲ್ಲಿ
ಎಲ್ಲಾ ಜನಂ ನೆರೆದು ತಿಂಥಿಣಿಸುತಿರಲಲ್ಲಿ
ಹೆಸರು ಕಲ್ಯಾಣದೇವಿಯ[13]ರೆಂದು ಒಪ್ಪುತಿ[13]ರೆ
ಎಸೆಯಲಾಕೆಯ ಮನೋವಲ್ಲಭಂ ನೋಡುತಿರೆ*
ಪೂರ್ತೆಳಪ ಚಂದ್ರಮಂಡಲ[14]ಮದೆಂತು[14]ತಂತೆ
ಸೀರ್ತೆಗೆದ ರತ್ನಾಕರನ ಕಾಂತಿಯೆಂತಂತೆ
ಇರ್ದೋಲಗದ ರಂಗಮಂಟಪದ ಮಧ್ಯದೊ[15]ಳ್[15]
ಸಾ[16]ರ್ದ ಸಂಗೀತ[16]ತಂತ್ರಂ [17]ಬೆಳೆವ[17] ಸಮಯದೊ[18]ಳ್[18]
ನೀಲಪಟವೆಸೆವ ಜವನಿಕೆ ನಡುವೆ [19]ನೆ[19]ಱತಿನಿಲ[20]ಲ್[20]
ತಾಳದೊ[21]ಳ್ ಲಯಗತಿಗಳು[21]ಗ್ಗಡಣೆ ಎಸೆದಿರ[22]ಲ್[22]

---

[1] ತಂ (ಚಪ) [2] ನೋಡಲಿದಿರಿರ್ದ (ಚಪ) [3] ನಿತ್ತಲತ್ತಲು (ಚಪ) [4] ಯ (ಕ) [5] ಮಿ (ಕ) [6] ದೆ (ಕ) [7] ಮುಗ್ಧೆಮಧ್ಯಮ ಪ್ರಗಲ್ಭೆಯರೊಪ್ಪಿ (ಕ) ಶೃಂಗಾರ ಮುಗ್ಧೆ ವಿದಗ್ಧೆಯರು (ಚ) [8] ಲು (ಪ) [9] ಸಿದ್ಧ (ಕ) ಸಂಗೀತ (ಚ) [10] ಲ್ಲಿ (ಚ) [11] ಲು (ಪ) [12] ರುಭ್ಯ (ಕ) ರುವ್ಯ (ಚ) [13] ರುವೊಪ್ಪುತ್ತುಮಿ (ಕ) [14] ಶೋಭೆಯಂ (ಕ) [15] ಳು (ಪ) [16] ರ್ದ ಸನ್ನಿತ (ಕ) [17] ಬಳೆದ (ಕ) [18] ಳು (ಪ) [19] ನ (ಕ) [20] ಲು (ಪ) [21] ಳ್ಳ (ಚಪ) [22] ಲು (ಪ)

* ಈ ಸಾಲುಗಳು ಚಪ ಪ್ರತಿಗಳಲ್ಲಿಲ್ಲ.

ಸಲೆಸೌಖ್ಯಮಯನೆಂಬ ಶಿವಭಕ್ತನಾಕೆಯೊಳ್
ನೆಲಸಿರ್ದ ನೇಹದಿಂ ನೋಡುತಿರಲಶ್ತಿಯೊಳ್
ಸತ್ಯಸುಖ ಮಯನಪ್ಪ ಶಿವಭಕ್ತನಾಕೆಯೊಳ್
ಅತ್ಯಂತ ಮೋಹದಿಂ ಮನಹಿಂಗದಾಕೆಯೊಳ್ (ಕ)

ದೇವ ಚಿತ್ತೈ[1]ಸೆಂಬ ಕ್ಷೈವಾ[1]ರವೆಸೆವುತಿರೆ
[2]ಯಾ[2]ವುಜದ ನು[3]ಣ್ಣಿನ[3] ಠಣತ್ಕಾರ[4]ಮು[4]ಣ್ಮುತಿರೆ
ಮೃದುಮೃದಂಗದ ಧಿಮಿಧಿಮಿ [5]ಪ್ರನಾದಂ[5] ಮಸಗೆ
ಒದವಿ ಕರಡೆಯ ಕಟಕ[6]ಠಱತ್ರಂಬ ರವವೆಸಗೆ[6]
ಕಹಳಾರವಂ ತಾರ ಮಧುರ ಮಂದ್ರಮನುಗುಳೆ
ಬಹುವಿಧದ ಗತಿಗೆ ಕೌಸಾಳ ಝುಲ್ಲೆ[7]ನಲು[7]ಗುಳೆ
ಸುಗತಿಗಳ ನಡುವೆ ಪುಷ್ಪಾಂಜಳಿಯ[8]ನೀ[8]ಡುತಿರೆ
ಬಗೆಮಿಗಲು ಹರನೋಲಗಂ ಬಳಸಿ ನೋಡುತಿರೆ
ತೊಲತೊಲಗು ತೊಲಗೆಂ[9]ಬ ದ್ವನಿಪುಟ್ಟಿದುದು ನಡುವೆ
ಕೆಲಸಾರು ಸಾರೆಂಬ ರವ ಪುಟ್ಟಿ[10]ದು[10]ದು ನಡುವೆ
ಬಾಹೂರ ಬೊಮ್ಮಯ್ಯನೀಬಂದನೆಂದೆಂಬ
ಸಾಹಸಾಭರಣನೀಬಂದಪಂ ಸಾರೆಂಬ
ಉರವ[11]ಣೆಯ[11] ಪಡಿಯಱರ್ ಮುಂದೆ ಬರುತಿರೆ ಕಂಡು
ಪಿರಿದು ರಭಸಂಗಳಾಗಲ್ಕೆ [12]ಬೆಬ್ಬಳಿ[12]ಗೊಂಡು
ಗಿಳಿ ತುಂಬಿ ಕೋಗಿಲೆಯ ಹಿಂಡು ಕೆದ[13]ಱುವ[13] ತೆಱದಿ
ಕಳಹಂಸೆ ಕೇ[14]ಕಿ[14] ಕೋಕಾಳಿ ಹೆದ[15]ಱುವ[15] ತೆಱದಿ
[16]ತಾಳಧರರೊಂದೆಸೆಗೆಯಾವುಜಗರೊಂದೆಸೆಗೆ
ಮೇಳವಣೆಯೊಂದೆಸೆಗೆ ಮದ್ದಳಿಗರೊಂದೆಸೆಗೆ
ಕರಡೆಕಾಱರ್ ಕಹಳೆಕಾಱರಂತೊಂದೆಸೆಗೆ
ನೆರೆದ ಸಂಗೀತಜನರೆಲ್ಲರೊಂದೊಂದೆಸೆಗೆ
ಚೆಲ್ಲುತಿರೆ ಬಾಹೂರ ಬೊಮ್ಮಯ್ಯನೆಯ್ತಂದು[16]
ಸಲ್ಲೀಲೆಯಿಂ[17]ದ[17] ಶಂಕರನನಪ್ಪುತ್ತಂದು
ಪಾದೋದ[18]ಕ[18] ಪ್ರಸಾದಂಗಳಂ ಕೈಕೊಂಡು
[19]ಸಾ[19]ದರಂ ಮಿಗೆ ಶೈವಸಂಪದ[20]ವ[20]ನೆಡೆಗೊಂಡು

---

1 ಸೆನಿಪ್ಪವಧಾ (ಚಪ) 2 ವಾ (ಕಚ) 3 ಣ್ಚರಂ (ಕ) 4 ವು (ಚಪ) 5 ಘೃಣಾಣಂ (ಕ) 6 ಧಟ್ಟೆಂಬರವವೊಳಗೆ (ಚಪ) 7 ನೆನು (ಚಪ) 8 ನಾ (ಕ) 9 ದೆಂಬ ಧ್ವ (ಕ) ಬಧ್ವ (ಪ) 10 ತ (ಕ) 11 ಣಿಸಿ (ಕ) 12 ಬೆಬ್ಬೆಳೆ (ಕ) ಬೊಬ್ಬುಳಿ (ಸ) 13 ಱಿದ (ಚಪ) 14 ಳಿ (ಚಪ) 15 ಱಿದ (ಚಪ) 16 ಎಲ್ಲಾ ಜನಂ ಕೆದಱಿ ಚೆಲ್ಲೆತಾನೈತಂದು (ಚಪ) 17 ದೆ (ಕ) 18 ಕಂ (ಪ) 19 ಆ (ಚಪ) 20 ಮ (ಕ)

ಇರುತಿರಲು [1]ರಂಗ[1]ಮಂಟಪದೊಳಗೆ [2]ನಿಲ[2]ಲಲ್ಲಿ
ಹರನ ಮುಂದಣ ಪಾತ್ರವೇಕಾಡದೆನಲಲ್ಲಿ
ಕೇಳುತೆ ಸುಖಪ್ರಿಯಂ ಸುಖಸಳಿದು ನೆಜಿತನೊಂದು
[3]ಆಳನ[3]ಟ್ಟೆಳಲಿಂದೆ ಮುಳಿದು ನುಡಿದಪನಂದು
ಎಲೆ ಭಕ್ತ ಶಿವಭಕ್ತ ಜನದ ಸುಖವುಂ ಕೆಡಿಸಿ
ನೆಲೆಗೊಂಡ ನೃತ್ಯಮಂ ನೋಳ್ಪ ಭರ[4]ಮಂ ಬಿಡಿ[4]ಸಿ
[5]ಓ[5]ಲಗದ ಸುಖಲತೆಯನು[6]ಡಿದು[6] ಕುಡಿಯಂ ಕುಯ್ದು
ಆಳೋಕಿಸುವ ಜನದ ಕಣ್ಗೆ ಕಸಮಂ ಪೊಯ್ದು
ಇನ್ನಾಡವೇಳ್ದೊಡಂ ಪಾತ್ರವೇಕಾಡುವುದು
ಮು[7]ನ್ನೊಪ್ಪುವೀ ನೃತ್ಯ[7]ವೇಕೆ ಹಸನಾದಪುದು
ಹೊ[8]ಸ[8]ದ ಹೂ ನವಪರಿಮಳಂಗುಡಲ್ ಬಲ್ಲುದೇ
ಬಿಸಿ[9]ಲಸ್ಸೈದಿಲ್ ವಿಕಾಸವ[9]ನ್ನೈದಬಲ್ಲುದೇ
ಇಂತು ಸುಖವುಂ ಕೆಡಿಸಿ ನೀಮಾಡಿತೇನಿಲ್ಲಿ
ಕಂತುಹರನಲ್ಲಿ ಪಡೆದರ್ಥವೇನಿಂತಿಲ್ಲಿ
ಎನೆ ಕೇಳ್ದು ಬಾಹೂರ ಬೊ[10]ಮ್ಮ[10]ತಂದೆಗ[11]ಳಂ[11]ದು
ಮನದೊಳಗೆ ಸುಯ್ದು ಭಕ್ತನನೀಕ್ಷಿಸು[12]ತೆ ನಿಂದು[12]
ದೇವ ಎನ್ನಂ[13] ದೂ[13]ಜಿ ತೋಱವೇಳ್ಪ[14]ದೆ[14] ನಿನಗೆ
ದೇವ ಬೆಸಸುವು[15]ದು ಬೆಸಸುವುದಂ[15]ಜಲೇಕೆನಗೆ
ಎಂದಡೆ ಸುಖಪ್ರಿಯಂ ಬೊಮ್ಮಯ್ಯನಂ ನೋಡಿ
ನಿಂದು ಮಾತಾಡಿದಂ ಕಟಕಿಗಳನುಜಿತ ಕೂಡಿ
ಬಗೆವೆಚ್ಚಿ ಜೋಳ[16]ವಂ[16] ನುಡಿಯಿಸಿದೆನೆಂದೆಂಬ
ಜಗ[17]ದೀಶನಾ[17]ನೆಯಂ ಗಂಡುಗೆಡಸಿದೆನೆಂಬ
ಗರ್ವ[18]ವೇಕೆನ್ನೊಡನೆ[18] ಬಾಹೂರ ಬೊಮ್ಮಯ್ಯ
ಉ[19]ರ್ವಿನಿಂ[19] ಮಾಡುವೊಡೆ ಪೇಳ್ದಪೆಂ ಕೇಳಯ್ಯ
ಎನುತೆ ತನ್ನಯ ಕೈಯೊಳಳ್ತಿಯಿಂ ಪಿಡಿದಿರ್ದ
ಮನಸಿಜನ ಕೈಯಿಂದೆ ಸೆಳೆದುಕೊಂಡಂತಿರ್ದ
ಇಕ್ಷುದಂಡ[20]ವ[20]ನಲ್ಲಿ ಹರುಷದಿಂದಂ ನೋಡಿ

---

[1] ಭೋಗ (ಚಪ) [2] ನ (ಕ) [3] ಯೇಳನೆ (ಕ) [4] ವಂ ನಿಲಿ (ಚಪ) [5] ಯೋ (ಕ) [6] ಡುಗಿ (ಚಪ) [7] ನ್ನಿನಿಸ್ಸೃತ್ಯರಸ (ಕ) ನ್ನವೀನೃತ್ಯ (ಚ) [8] ಸ (ಕ) [9] ಲೊಳ್ಳೈದಿಲ್ವಿಕಾಸನು (ಚಪ) [10] ಮ್ಮ (ಕ) [11] ಳಲ್ಲೆಂ (ಕ) [12] ತವುನದೊಳಗೆ (ಚ) [13] ಮಾ (ಕ) [14] ದು (ಚಪ) [15] ದಂಜಲೇಕು (ಚ) [16] ಮುಂ (ಪ) [17] ಪತಿಯ ಆ (ಚಪ) [18] ವೆಮ್ಮೊಡನೇಕೆ (ಚಪ) [19] ರ್ಬಿನಿಂ (ಕ) ರ್ವಿನಿಂದಾ (ಪ) [20] ಮ (ಕ)

ತ್ರ್ಯಕ್ಷನಣುಗನೆನಿಪ್ಪ ಬೊಮ್ಮಯ್ಯನಂ ನೋಡಿ
ಈ ಕರ್ಬನಿಂ ನಂದಿಗಾರೈಸಿಕೊಡೆ ಬಳಿ[1]ಕೆ[1]
ಈ ಕೇಳಿಕೆಯನಿಳಿ[2]ದ[2] ಮುಳಿಸ, [3]ತೀರ್ಕೆಂ[3] ಬಳಿ[1]ಕೆ[4]
ನಿನ್ನ ಸಾಮರ್ಥ್ಯಮಂ ನೋಡುವೆಂ [5]ನಾ[5]ನೆಂದು
ನಿನ್ನೊಬ್ಬಟೆಯ ಭಕ್ತಿಯಂ ಕಾಣ್ಬೆನಾನೆಂದು
ಎನಲಿಕ್ಷುದಂಡಮಂ [6]ಕಳೆ[6]ದುಕೊಂಡಂ ಧೀರ
[7]ಅ[7]ನುಮಾನವಿಲ್ಲದಪ್ರತಿಮನುನ್ನತ ವೀರ
[8]ಅ[8]ಲ್ಲಿ ನಂದಿಯ ಮುಂದೆ ಕುಳ್ಳಿರುತ್ತಮ್ಮಮ್ಮ
ಬಲ್ಲಿದಂ [9]ಭಾಷೆಗು[9]ಡುತಿರ್ದನೊಲಿದಮ್ಮಮ್ಮ
ಒಂದು ಕಟ್ಟೈದು[10]ವು[10]ದೆ ನಂದೀಶದೇವಂಗೆ
ಮಂದರಂ ಕೈಲಾಸ ಮೇರು ಸಮಕಾಯಂಗೆ
ಇಲ್ಲಿ ಕಲ್ಯಾಣದ ಬಹಿ[11]ರ್ವ[11]ನದೊಳಗೆ ಬೆಳೆದ
ಎ[12]ಲ್ಲ ರಸವಿಸರ[12] ಮಧು[13]ರತೆ[13]ಗಳಂ [14]ತವೆತ[14]ಳೆದ
ಕ[15]ರ್ಬ[15]ನಿತುಮಂ ತರಿಸಿ [16]ಆರೈ[16]ಸಲಿಕ್ಕು[17]ವಂ[17]
ಉ[18]ರ್ವೀಶ[18] ಬಿಜಗಾಗಲೆನ್ನೊಡ[19]ನೆ ನಡಸುವಂ[19]
ಈವೂರ ಕೆರೆಯಂಗಣ್ಣಿಯನೊಲಿದು ಕುಡಿ[20]ಸುವಂ[20]
ದೇವಾಲಯ[21]ಮುಮಂ[21] ಪ್ರದಕ್ಷಿಣಂ [22]ನಡೆಸುವಂ[22]
ಮುಂತೆ ಹಳೆಯಂತೆ ಹರನಿಳಯದೊ[23]ಳಗಿರಿಸುವಂ[23]
ಇಂತಿದಂ ಜ[24]ಗ[24]ವೆಲ್ಲ ನೋಡುತಿರೆ ಮಾ[25]ಡುವೆಂ[25]
ಮಾಡ[26]ದೊಡೆ[56] ಮರ್ತ್ಯದೊಳಗಿ[27]ರೆನಿನ್ನು[27] ಮಾತಿಲ್ಲ
ಮಾಡು[28]ವೆಂ[28] ಮಾಡುವೆಂ ಮಾಡುವೆಂ ಪುಸಿಯಲ್ಲ
ಅವಧರಿಪುದೀಶ್ವರನ ಭಕ್ತಾಳಿ ಭಾಷೆಯಂ
ಶಿವನೊಲಿದು ಕರುಣಿಸುವ ಸಾಮರ್ಥ್ಯರಾಶಿಯಂ

---

1 ಕೆ (ಕ) 2 ದು (ಚಪ) 3 ತಿರುಗುಗು (ಚಪ) 4 ಕೆ (ಕ) 5 ತಾ (ಕ) 6 ತೆಗೆ (ಚ) 7 ನ (ಕಪ) 8 ನ (ಕ) 9 ಬಾಸೆಗೊ (ಕ) 10 ಸೈವು (ಕ) 11 ರ್ನಂದ (ಚಪ) 12 ಲ್ಲಾರಸ ಪ್ರಸರ (ಕ) ಲ್ಲಾ ರಸಪ್ರಸಾರಂ (ಚ) 13 ರಂ (ಚ) 14 ತ (ಕ) 15 ಬ್ಬ (ಚಪ) 16 ರಾರಯಿ (ಕ) 17 ವೆ (ಪ) 18 ರ್ವಿ (ಚಪ) 19 ನೊಡನೆ ನಡಯಿಸುವೆ (ಚಪ) 20 ಯಿಸುವೆ (ಚಪ) 21 ಮಂ (ಚ) 22 ಬರಿಯಿಸುವೆ (ಚಪ) 23 ಳು ಕುಳ್ಳಿರಿಪೆ (ಚ) 24 ನ (ಚಪ) 25 ಡಿವಪೆ (ಚಪ) 26 ದಿರೆ (ಕ) ದಡೆ (ಚ) 27 ಹೆನೆಂಬ (ಚಪ) 28 ವೆ (ಕ)

ಎಂದು ನುಡಿ[1]ಯುತ್ತ[1]ಮಿರೆ ತನುತಮಗೆ ಪರಿತಂದು
ಬಂದು ಪಟ್ಟಣದ ಪೂಜನಳಲ [2]ಬ[2]ನದೊಳು ನಿಂದು
ಪೊಂಗೊಟ್ಟ ಕ[3]ರ್ಬ[3]ನಿತುಮಂ [4]ಕೇ[4]ಣಿಯುಂ ಕೊಂಡು
[5]ಅಂಗವಿಸಿಯುಡ[5]ಕತೊಡಗಿತ್ತಲ್ಲಿ ಸಾಲ್ಗೊಂಡು
ಬ[6]ರಲ[6]ಲ್ಲಿ ಹರನ ರಾಜಾಂಗಣದೊಳಗೆ ನೋಡೆ
ತರದಿಂ[7]ದೆ[7] ಸಣ್ಣತಟ್ಟೆಗಳ ಹಾಸುತೆ ಕೂಡೆ
ತೊಳಗುವ ದಣಿಂಬಂಗಳಂ ಮೇ[8]ಗೆ[8] ಮಿಗೆಹಾಸಿ
[9]ಅ[9]ಳಿಗಳಜಿಸುವ ಸುಪ್ರ[10]ಸೂನ[10] ಕುಲ[11]ವಂ[11] ಹಾಸಿ
ಇಕ್ಷುದಂಡದ ಮೊದ[12]ಲತು[12]ದಿಗಳಂ ಕಳೆ[13]ವುತಂ[13]
ಪ್ರಕ್ಷಾಳನಂ ಮಾಡಿ ತಂದುತಂದಿಳೆ[13]ವುತಂ[13]
ಇರಲೊಂದೆರ[14]ಳ್ಟೆ[14]ಟ್ಟದಂತೆ ಕ[15]ರ್ಬು[15]ಗಳೊಟ್ಟೆ
ಅರುಣೋದಯಂ ಬಂದು ಪೂರ್ವಾದ್ರಿಯಂ ಮು[16]ಟ್ಟೆ[16]
ನಂದೀಶ್ವರಂ ಕ[17]ರ್ಬ[17]ನಾರ್ಕೆಸುವಂದದಮಂ
ಇಂದು ನೋಡುವೆನಿಳೆಗೆ ಪೊಸತೆನಿಪ ಛಂದಮಂ
ಎಂಬಂತೆ ರವಿಯುದಯವಾಗುತಿರೆ ಬೆಳಗು[18]ತುಂ[18]
ಇಂಬೆನಿಂ ಬಾಹೂರ ಬೊಮ್ಮಯ್ಯ[19]ನುರ್ಬುತುಂ[19]
ತ್ರಿಪುರಾಂತಕಪ್ರಭುವಿನಲ್ಲಿ ನೇಮಂ ಮಾಡಿ
ವಿಪುಳ[20]ತ[20]ರ ಕಾರುಣ್ಯಸಿಧಿ ಶಂಭುವಂ ನೋಡಿ
ದೇವ ನಿಶ್ಚಿಂತ ಸಜ್ಜನ ಜನಾಧೀನ[21]ನೇ[21]
ದೇವ ನಿಜಪದ [22]ಭಕ್ತಿಯುಕ್ತರಾಧೀನನೇ[22]
ದೇವ ಶಿವಯೋಗಿಗಳ ಮಾನಸಧ್ಯಾನವೇ
ದೇವ ಸದ್ಭಕ್ತಕುಲ ಹೃತ್ಕಮಲ ಭಾನುವೇ
ದೇವ ನಿರ್ಗುಣತತ್ವ [23]ಸ[23]ಗುಣ ಸ್ವರೂಪನೇ
ದೇವ ಭೀಕರತರ ಪಿನಾಕೈಕಚಾಪನೇ

---

1 ವೃತ್ತ (ಜ) ವೃತ್ತು (ಪ) 2 ವ (ಕ) 3 ಬ್ಬ (ಜಪ) 4 ಚೇ (ಜಪ) 5 ಆಂಗೈಸಿಯಡ (ಕ) ಅಂಗವಿಸಿಆಡು (ಪ) 6 ರುತ (ಕ) 7 ದ (ಜಪ) 8 ಲೆ (ಕ) 9 ಯ (ಕ) 10 ಸವ (ಜಪ) 11 ಮುಮಂ (ಪ) 12 ಲ್ತು (ಕ) 13 ಯುತಂ (ಕ) 14 ಡ್ಪೆ (ಕ) 15 ಬ್ಬು (ಪ) 16 ಟ್ಟಿ (ಕ) 17 ಬ್ಬ (ಪ) 18 ತಂ (ಪ) 19 ನದ್ಭುತಂ (ಜಪ) 20 ವ (ಜಪ) 21 ವೆ (ಕ) 22 ಯುಕ್ತಭಕ್ತರಭಿಮಾನವೇ (ಕ) 23 ಸು (ಪ)

ದೇವ ತ್ರಿಶೂಲ ಡಮರುಗ ವಿಮಳಹಸ್ತನೇ
ದೇವ ಭಕ್ತಾವರಣ ಶರಣರ ಕರ[1]ಸ್ಥಲನೆ[1]
ದೇವ ಪುಣ್ಯಪ್ರಕರ ಸೇವಿತ ಪದಾಬ್ಜನೇ
ದೇವ ಪೌಳ್ಯನ್ಯಸ್ತ ವಿಸ್ತರಪದಾಬ್ಜನೇ
ದೇವ ವೃಷಭೇಂದ್ರಂಗೆ ಕರುಣಿಸೆಲೆ ಶಂಕರಾ
ದೇವ ನಂದೀಶಂಗೆ ಬೆಸನೆಲೆ ಕೃಪಾಕರಾ
ಎಂದು ಬಿ[2]ನ್ನವಿ[2]ಸುತಿರೆ ಶಿವನ ಸಿರಿಮುಡಿಯಿಂ[3]ದೆ[3]
ಒಂದರಲ್ ಸ[4]ಡಿಲೆ[4] ಕಾಣುತ್ತೆ ಸಂತಸದಿಂ[5]ದೆ[5]
ಪರಿತಂದು ಪಾದೋದಕಪ್ರಸಾದಂಗೊಂಡು
ತಿ[6]ರು[6]ಗಿ ವೃಷಭೇಂದ್ರನಲ್ಲಿಗೆ ಬಂದು ಕೈಕೊಂಡು
ಇದೆ ರುದ್ರನಾ[7]ದೇ[7]ಶವನವಧರಿಸು ನಂದೀಶ
ಇದೆ ಶಿವನ ಕಾರುಣ್ಯವೇಳಯ್ಯ ನಂದೀಶ
ಸಕಲಮಂ ರಕ್ಷಿಸುವ ಶಿವಧರ್ಮ ಮೂರ್ತಿಯೇ
ಮಕರಧ್ವಜಾರಿಯ ಮಹಾಪುಣ್ಯಕೀರ್ತಿಯೇ
ಶಂಕರನ ದೃಷ್ಟಿವಾರಿಯ ನೇಮದಚಳಿತನೆ
ಶಂಕರನ ತೊಡೆಮಡಕ್ಕಳ[8]ವಡುವ[8] ಸನ್ನುತನೆ
ಅಸಮನಯನನ ಸರ್ವಸಾಮರ್ಥ್ಯ ಸನ್ನಿಭನೆ
ಮುಸುಟೆ[9]ಯಾ[9] ಚೌಂಡರಾಯನ ಮನೋವಲ್ಲಭನೆ
ಬಾರಯ್ಯ ನಂದೀಶ ಬಾರಯ್ಯ ವೃಷಭೇಂದ್ರ
ಬಾರಯ್ಯ ಪುಣ್ಯಮಯ ಬಾರ ನಿರ್ಮಳಚಂದ್ರ
ಎಂಬ ನುಡಿ ವೃಷಭರಾಜನ ಚಿತ್ತದೊಳ್ ಬೆರ[10]ಸೆ[10]
ತ್ರ್ಯಂಬಕಧ್ಯಾನಮುಮನೊತ್ತರಿ[11]ಸುತಂಕುರಿಸೆ[11]
ಎಳಲ್ವ ಕಿವಿಗಳನೆತ್ತಿ [12]ದ[12]ನಿಯನಾರೈಸು[13]ತುಂ[13]
ಹೊಳೆವ ಶಿವಲಿಂಗಮಂ ನೋಡಿ ಹಾರೈಸು[13]ತುಂ[13]
ಕೆಲಕೊ[14]ಮ್ಮೆ[14] ಬಲಕೊ[14]ಮ್ಮೆ[14] ವದನಮಂ ತಿರಿಪು[15]ತುಂ[15]
ನಲವಿಂ[16]ದೆ[16] ಶಂಕರಂಗಾ[17]ನತನುಮಾ[17]ಗು[18]ತುಂ[18]

---

[1] ಣಸ್ಥನೇ (ಚಪ) [2] ಸ್ನೈ (ಪ) [3] ದ (ಚ) [4] ರಿಯೆ (ಚಪ) [5] ದ (ಚ) [6] ರಿ (ಕ) [7] ವೇ (ಚ) [8] ವ (ಕ) [9] ಯ (ಕಚ) [10] ಸಿ (ಕ) [11] ಸಿಯುಂಕುರಿಸಿ (ಕ) [12] ಧ್ವ (ಚಪ) [13] ತಂ (ಚಪ) [14] ರ್ಮೆ (ಕ) [15] ತಂ (ಚಪ) [16] ದ (ಕ) [17] ನಂದವಾ (ಕ) [18] ತಂ (ಚಪ)

